# ಕರ್ನಾಟಕ ಲೋಚನ

ಷಾಣ್ಮಾಸಿಕ ವಿದ್ವತ್ ಪತ್ರಿಕೆ

ಸಂಪುಟ : ೨೦ ಡಿಸೆಂಬರ್ ೨೦೦೬ ಸಂಚಿಕೆ : ೦೨

ಸಂಪಾದಕರು

ಪ್ರೊ॥ ಜಿ. ಅಬ್ದುಲ್ ಬಷೀರ್

ಡಾ॥ ಎಚ್. ಶಶಿಕಲಾ



ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನ

ಬಿ.ಎಂ.ಶ್ರೀ. ಕಲಾಭವನ (ರಿ.)

೩ನೇ ಮುಖ್ಯರಸ್ತೆ, ನರಸಿಂಹರಾಜ ಕಾಲೋನಿ, ಬೆಂಗಳೂರು-೧೯

ದೂರವಾಣಿ : ೨೬೬೧೫೮೭೭

# ಕರ್ನಾಟಕ ಲೋಚನ

## ಷಾಣ್ಮಾಸಿಕ ವಿದ್ವತ್ ಪತ್ರಿಕೆ

ಸಂಪುಟ : ೨೦ ಡಿಸೆಂಬರ್ ೨೦೦೬ ಸಂಚಿಕೆ : ೦೨

*ಸಂಪಾದಕರು*

**ಪ್ರೊ॥ ಜಿ. ಅಬ್ದುಲ್ ಬಷೀರ್**

**ಡಾ॥ ಎಚ್. ಶಶಿಕಲಾ**

**ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನ**

ಬಿ.ಎಂ.ಶ್ರೀ. ಕಲಾಭವನ (ರಿ.)

೩ನೇ ಮುಖ್ಯರಸ್ತೆ, ನರಸಿಂಹರಾಜ ಕಾಲೋನಿ, ಬೆಂಗಳೂರು – ೫೬೦ ೦೧೯

ದೂರವಾಣಿ : ೨೬೬೧೫೮೭೭

**KARNATAKA LOCHANA** (Half yearly Research Journal)
Editors : Prof. G. Abdul Basheer and Dr. H. Shashikala, Published by B.M.Sri Smaraka Prathistana, 3rd Main Road, Narasimharaja Colony, Bangalore - 560 019

Year : December 2006 (Vol. 20, No. 02)

ವಾರ್ಷಿಕ ಚಂದಾ : ರೂ. ೫೦-೦೦
ಪ್ರತಿಷ್ಠಾನದ ಆಜೀವ ಚಂದಾ : ರೂ. ೫೦೦



ಮುದ್ರಣ
ಇಳಾ ಮುದ್ರಣ
ನಂ. ೩೬, ೪೦ ಅಡಿ ರಸ್ತೆ
ರಾಘವನಗರ, ನ್ಯೂ ಟಿಂಬರ್‌ಯಾರ್ಡ್ ಲೇಔಟ್
ಬೆಂಗಳೂರು - ೫೬೦ ೦೨೬
ದೂರವಾಣಿ : ೨೬೭೫೭೧೫೯ / ೩೨೭೧೫೭೭೩

# ನಿಮ್ಮೊಡನೆ ಒಂದೆರಡು ಮಾತು....

'ಕರ್ನಾಟಕ ಲೋಚನ' ಷಾಣ್ಮಾಸಿಕ ವಿದ್ವತ್ ಪತ್ರಿಕೆಯ ಡಿಸೆಂಬರ್ ೨೦೦೬ರ ಸಂಚಿಕೆಯು ತಡವಾಗಿ ತಮ್ಮ ಕೈ ಸೇರುತ್ತಿರುವುದಕ್ಕೆ ಕ್ಷಮೆ ಇರಲಿ. ಸಂಪಾದಕೀಯ ಮಂಡಳಿಯಲ್ಲಿ ಆದ ಬದಲಾವಣೆಯಿಂದಾಗಿ, ನಾವು – ಜಿ. ಅಬ್ದುಲ್ ಬಷೀರ್ ಮತ್ತು ಎಚ್. ಶಶಿಕಲಾ – ಇದರ ನಿರ್ವಹಣೆಯನ್ನು ವಹಿಸಿಕೊಂಡಿದ್ದೇವೆ.

ಬದುಕಿನ ಎಲ್ಲ ರಂಗಗಳಲ್ಲಿ ಅನುಭವಕ್ಕೆ ಬರುತ್ತಿರುವ ಸ್ಥಿತ್ಯಂತರ ಸ್ವಯಂವೇದ್ಯ. ಕಾಲದ ಬಡಿತವನ್ನು ನಿಯತಕಾಲಿಕಗಳು ತಮ್ಮೊಡನೆ ಸಾಗಿಸಿಕೊಂಡು ಬಂದಾಗಲೇ ಅವುಗಳು ತಮ್ಮ ಕಾರ್ಯವನ್ನು ಯಶಸ್ವಿಯಾಗಿ ನಿರ್ವಹಿಸುತ್ತಿರುತ್ತವೆ. ಈ ದೃಷ್ಟಿಯನ್ನು ಹಿನ್ನೆಲೆಗಿಟ್ಟುಕೊಂಡು ಮುಂದಿನ ಸಂಚಿಕೆಗಳ ಸ್ವರೂಪವನ್ನು ಈ ಉದ್ದೇಶಕ್ಕೆ ಅನುಗುಣವಾಗಿ ರೂಪಿಸುವ ಯೋಚನೆಯಿದೆ. ಇದರೊಡನೆ ಸಂಶೋಧನೆಯ ಮುಖ್ಯಗುರಿಯಾದ ವ್ಯಕ್ತಿಯ ಕಣ್ಣ ಬೆಳಕಿನಲ್ಲಿ ಅಂತರಂಗಕ್ಕೆ ಗೋಚರಿಸುವ ವ್ಯಕ್ತಿ ವಿಶಿಷ್ಟ ಸತ್ಯದ ಅಭಿವ್ಯಕ್ತಿಯನ್ನು ಹಿಡಿಯುವ ಲೇಖನಗಳಿಗೆ ಆದ್ಯತೆ ನೀಡುವ ಉದ್ದೇಶವಿದೆ. ಅಲ್ಲದೆ ಹತ್ತೊಂಬತ್ತು ಮತ್ತು ಇಪ್ಪತ್ತನೆಯ ಶತಮಾನದ ಸಂಶೋಧನೆಯ ಮಾದರಿಗೂ ಈಗ ಸಂಶೋಧನೆ ನಡೆಸುತ್ತಿರುವ ಕ್ರಮದಲ್ಲೂ ಪಲ್ಲಟವಾಗಿದೆ. ಈ ಎಲ್ಲದನ್ನು ದೃಷ್ಟಿಯಲ್ಲಿಟ್ಟುಕೊಂಡು ಮುಂದಿನ ಸಂಚಿಕೆಯನ್ನು 'ಸಂಶೋಧನೆ' ಆಧರಿಸಿದ ವಿಶೇಷ ಸಂಚಿಕೆಯನ್ನಾಗಿ ರೂಪಿಸುವ ಆಲೋಚನೆ ಮಾಡಲಾಗಿದೆ. ಇದರಿಂದಾಗಿ ಮುಂದಿನ ಸಂಚಿಕೆಗಾಗಿ ಕನ್ನಡದಲ್ಲಿನ ಸಂಶೋಧನೆಯ ಸ್ವರೂಪದ ವಿವಿಧ ಮಾದರಿಯನ್ನು ಆಧರಿಸಿದ ಲೇಖನಗಳನ್ನು ಆಹ್ವಾನಿಸುತ್ತಿದ್ದೇವೆ.

ಈ ಸಂಚಿಕೆಯಲ್ಲಿ ಸಂಶೋಧನೆಗೆ ಸಂಬಂಧಿಸಿದ ಮೌಲಿಕವಾದ ಹಳೆಯ ಬರಹಗಳನ್ನು ಪುನರ್ ಮುದ್ರಿಸುವುದರ ಮೂಲಕ ಕನ್ನಡದಲ್ಲಿ ಸಂಶೋಧನೆಯನ್ನು ಕುರಿತಾದ ವಿಶಿಷ್ಟ ಚಿಂತನೆಗಳ ಹರಹನ್ನು ಹೊಸದಾಗಿ ಆರಂಭಿಸಿರುವ 'ಹಳತು-ಹೊನ್ನು' ವಿಭಾಗದ ಮೂಲಕ ಗುರುತಿಸಲಾಗುವುದು. ಈ ಸಂಚಿಕೆಯಲ್ಲಿ ಡಾ. ಎಂ. ಚಿದಾನಂದಮೂರ್ತಿಯವರ ಸಾಹಿತ್ಯ, ವಿಮರ್ಶೆ ಮತ್ತು ಸಂಶೋಧನೆ – ಇವುಗಳಲ್ಲಿರುವ ಸೃಜನಾತ್ಮಕತೆಯ ಸ್ವರೂಪವನ್ನು ಗುರುತಿಸುವ 'ಸಂಶೋಧನೆ ಮತ್ತು ವಿಮರ್ಶೆ' ಲೇಖನವನ್ನು ಈ ವಿಭಾಗದ ಅಡಿಯಲ್ಲಿ ಪ್ರಕಟಿಸುತ್ತಿದ್ದೇವೆ.

ಎಂದಿನ ಪ್ರೀತಿ ತಮ್ಮಿಂದ ನಮಗೆ ದೊರಕುತ್ತದೆ ಎಂಬ ನಿರೀಕ್ಷೆಯಲ್ಲಿ,

ಜಿ. ಅಬ್ದುಲ್ ಬಷೀರ್

ಎಚ್. ಶಶಿಕಲಾ

# ಪರಿವಿಡಿ

# ಧಾರವಾಡ ತಾಲ್ಲೂಕಿನ ಜೈನ ನೆಲೆಗಳು : ಒಂದು ಪರಿಚಯ

• ಅಪ್ಪಣ್ಣ ಎನ್. ಹಂಜೆ

## ೧.೧. ಪರಿಚಯ

ಕನ್ನಡ ನಾಡಿನ ಇತಿಹಾಸ ಮತ್ತು ಸಂಸ್ಕೃತಿಯೊಂದಿಗೆ ಜೈನಧರ್ಮವು ಹಾಸುಹೊಕ್ಕಾಗಿ ಬೆಳೆದುಬಂದಿದೆ. ಈ ಧರ್ಮ ಪರಂಪರೆಯ ವರ್ತಮಾನ ಕಾಲದ ೨೩ನೇ ತೀರ್ಥಂಕರನಾದ ಪಾರ್ಶ್ವನಾಥನು (ಕ್ರಿ.ಪೂ. ಸುಮಾರು ೮ನೆಯ ಶತಮಾನ) ಉಗ್ರವಂಶದವನು. ಈ ವಂಶಕ್ಕೂ ಕನ್ನಡ ನಾಡಿಗೂ ಪರಸ್ಪರ ಸಂಬಂಧವಿದೆ.[೧] ೨೪ನೆಯ ತೀರ್ಥಂಕರನಾದ ಮಹಾವೀರನ (ಕ್ರಿ.ಪೂ. ೫೯೯-೫೨೭) ಸಮವಸರಣ ಮಂಟಪವು (ಧರ್ಮಸಭೆ) ಕನ್ನಡನಾಡಿಗೆ ಆಗಮಿಸಿದ ವಿಚಾರ ವಾಧಿಭಸಿಂಹಸೂರಿಯ 'ಕ್ಷಾತ್ರಚೂಡಾಮಣಿ', ಭಾಸ್ಕರನ 'ಜೀವಂಧರಚರಿತೆ', ತಿರುತಕ್ತದೇವರ 'ಜೀವಕಚಿಂತಾಮಣಿ' ಮೊದಲಾದ ಕೃತಿ - ಕಾವ್ಯಗಳಿಂದ ಸ್ಪಷ್ಟವಾಗುತ್ತದೆ.[೨] ಕ್ರಿ.ಪೂ. ಸುಮಾರು ೪ನೆಯ ಶತಮಾನದಲ್ಲಿ ಅಂತಿಮ ಶ್ರುತಕೇವಲಿ ಭದ್ರಬಾಹು ಭಟ್ಟಾರಕನು (ಪಟ್ಟಾಭಿಷಿಕ್ತ ಕಾಲ ಕ್ರಿ.ಪೂ. ೩೯೪-೩೬೫) ತಮ್ಮ ಪ್ರಧಾನ ಶಿಷ್ಯ ನಂದ ಮನೆತನದ ಚಂದ್ರಗುಪ್ತನೊಂದಿಗೆ (ಕ್ರಿ.ಪೂ. ೩೭೨-೩೬೬) ಬೃಹತ್ ಮುನಿ ಸಮುದಾಯದೊಂದಿಗೆ ಉತ್ತರಾಪದದ ಉಜ್ಜೈನಿಯಿಂದ ಕನ್ನಡನಾಡಿನ ಶ್ರವಣಬೆಳಗೊಳಕ್ಕೆ ಆಗಮಿಸಿ,[೩] ಈ ನಾಡಿನಲ್ಲಿ ಜೈನಧರ್ಮದ ಪ್ರಸರಣಕ್ಕೆ ಚಾಲನೆ ನೀಡಿದರು. ಸಮಕಾಲೀನ ಅರಸು, ಮಂಡಳೇಶ್ವರ, ಸಾವಂತ, ಪ್ರಭುಗಾವುಂಡ, ಗಾವುಂಡ ಮೊದಲಾದ ಮನೆತನಗಳು ಈ ಧರ್ಮಕ್ಕೆ ನೀಡಿದ ಆಶಯ - ಪ್ರೋತ್ಸಾಹದಿಂದಾಗಿ ಮತ್ತು ಸಮಕಾಲೀನ ಮುನಿಪರಂಪರೆ ಹಾಗೂ ಜೈನ ಕವಿಗಳ ಪ್ರಯತ್ನದಿಂದಾಗಿ, ಇದು ಈ ನಾಡನ್ನು -

ಜಿನಧರ್ಮಾವಾಸಮಾದತ್ತಮಳ ವಿನಯದಾಗಾರಮಾದತ್ತು
ಪದ್ಮಾಸನನಿರ್ವಾಸದ್ಮವಾದತ್ತತಿವಿಶದ ಯಶೋಧಾಮಮಾದತ್ತು
ವಿದ್ಯಾಧನಜನ್ಮಸ್ಥಾನಮಾದತ್ತಸಮತರಳ ಗಂಭೀರ ಸದ್ಗೇಹಮಾದ
ತ್ತೆನಿಸಲ್ಕಿಂತುಳ್ಳ ನಾನಾ ಮಹಿಮೆಯೊಳೆಸೆಗುಂ ಚಾರುಕರ್ಣಾಟದೇಶಂ ॥

ಎಂದು, ತನ್ನ ಆವಾಸಸ್ಥಾನವನ್ನಾಗಿ ಮಾಡಿಕೊಂಡು ವಿಶೇಷವಾಗಿ ಬೆಳೆದುಬಂದಿದೆ.[೪] ಅಲ್ಲದೇ, ಈ ನಾಡಿನ ಸಾಹಿತ್ಯ, ಶಿಲ್ಪ, ವಾಸ್ತು, ಶಾಸನ, ಸಂಸ್ಕೃತಿ ಇತ್ಯಾದಿ ಸಾಂಸ್ಕೃತಿಕ ಕ್ಷೇತ್ರಗಳನ್ನು ಶ್ರೀಮಂತವಾಗಿಸಿದೆ.

## ೧.೨. ಧಾರವಾಡ ತಾಲ್ಲೂಕಿನ ಜೈನ ನೆಲೆಗಳು

ಮಲೆನಾಡು ಮತ್ತು ಬಯಲುನಾಡುಗಳ ಮಧ್ಯದಲ್ಲಿರುವ ಧಾರವಾಡ ತಾಲ್ಲೂಕವು, ತನ್ನ ಮಡಿಲಿನಲ್ಲಿ ಕೆಲವು ಮಹತ್ವವಾದ ಜೈನಾವಶೇಷಗಳನ್ನು ಒಳಗೊಂಡು, ಈ ಜೈನಧರ್ಮದ ಸಾಂಸ್ಕೃತಿಕ ಇತಿಹಾಸದ ಪುನಾರಚನೆಗೆ ವಿಶೇಷವಾದ ಕೊಡುಗೆಗಳನ್ನು ಅರ್ಪಿಸಿದೆ. ಒಂದು ಕಾಲದಲ್ಲಿ ಪ್ರಮುಖ ಜೈನಕೇಂದ್ರ/ನೆಲೆಗಳಾಗಿದ್ದ ಈ ತಾಲ್ಲೂಕಿನ ಕೆಲವು ಗ್ರಾಮಗಳಲ್ಲಿ ಇಂದು ಉಳಿದು ಬಂದಿರುವ ಪ್ರಾಚೀನ ಜೈನ ಶಾಸನ, ವಾಸ್ತು ಮತ್ತು ಶಿಲ್ಪಗಳನ್ನು ಪರಿಚಯಿಸುವುದು ಪ್ರಸ್ತುತ ಸಂಪ್ರಬಂಧದ ಉದ್ದೇಶವಾಗಿದೆ.

### ೧.೨.೧. ಅಗಸನಹಳ್ಳಿ

ಇದು ಧಾರವಾಡದಿಂದ ವಾಯುವ್ಯಕ್ಕೆ ೧೬ ಕಿ.ಮೀ. ಅಂತರದಲ್ಲಿದೆ. ಈ ಗ್ರಾಮದಲ್ಲಿ ಇತ್ತೀಚೆಗೆ ನನ್ನ ಕ್ಷೇತ್ರಕಾರ್ಯದಲ್ಲಿ ಕ್ರಿ.ಶ. ಸುಮಾರು ೧೧ನೆಯ ಶತಮಾನದ ಮಾನಸ್ತಂಭ ಬೆಳಕಿಗೆ ಬಂದಿದೆ. ಏಕಶಿಲೆಯಲ್ಲಿ ಕಂಡರಿಸಲ್ಪಟ್ಟಿರುವ ಇದು ೨೪೦ ಸೆಂ.ಮೀ. ಎತ್ತರವಾಗಿದೆ. ಮೇಲ್ಭಾಗದ ಚೌಕಾಕಾರದ ನಾಲ್ಕೂ ಮುಖಗಳಲ್ಲಿ ಕಾಯೋತ್ಸರ್ಗದಲ್ಲಿರುವ ಜಿನನ ಉಬ್ಬುಶಿಲ್ಪಗಳಿವೆ. ಇದರ ತುದಿಯು ದ್ರಾವಿಡ ಶೈಲಿಯ ಶಿಖರದ ಪ್ರತಿರೂಪದಲ್ಲಿದೆ.

### ೧.೨.೨ ಅಮ್ಮಿನಬಾವಿ

ಇದು ಧಾರವಾಡದಿಂದ ಈಶಾನ್ಯಕ್ಕೆ ೧೦ಕಿ.ಮೀ. ಅಂತರದಲ್ಲಿದೆ. ಸ್ಥಳೀಯ ನೇಮಿನಾಥ ಜಿನಾಲಯವು ಕ್ರಿ.ಶ. ಸುಮಾರು ೧೦ನೆಯ ಶತಮಾನದಲ್ಲಿ ನಿರ್ಮಾಣವಾಗಿದೆ. ಇದರ ತಲವಿನ್ಯಾಸವು ಗರ್ಭಗೃಹ, ಅಂತರಾಳ, ನವರಂಗ ಮತ್ತು ಮುಖಮಂಟಪದಿಂದ ಕೂಡಿದೆ. ಮೂಲತಃ ಇದು ಚಂದ್ರಪ್ರಭನಾಥನ ಜಿನಾಲಯವಾಗಿತ್ತು.[೫] ಕ್ರಿ.ಶ. ಸುಮಾರು ೧೫ನೆಯ ಶತಮಾನದಲ್ಲಿ ಶಾಂತಿನಾಥನ ಜಿನಾಲಯವೆಂದು ಪ್ರಸಿದ್ಧವಾಯಿತು.[೬] ಜೀರ್ಣಾವಸ್ಥೆಯಲ್ಲಿದ್ದ ಇದನ್ನು ಕ್ರಿ.ಶ. ೧೪೮೨ರಲ್ಲಿ ಸ್ಥಳೀಯ ದಿವಂಗತ ಬಲ್ಲಾಳರಾವ ದೇಸಾಯಿ ಅವರು ಜೀರ್ಣೋದ್ಧಾರಪಡಿಸಿ, ನೇಮಿನಾಥ ತೀರ್ಥಕರನ ಶಿಲ್ಪವನ್ನು ಪ್ರತಿಷ್ಠಾಪಿಸಿದ ತರುವಾಯ ಇದು ನೇಮಿನಾಥನ ಜಿನಾಲಯವೆಂದು ಕರೆಯಲ್ಪಡುತ್ತಿದೆ.[೭] ಈ ಜಿನಾಲಯದಲ್ಲಿ ಕ್ರಿ.ಶ. ಸುಮಾರು ೧೧ನೆಯ ಶತಮಾನದ ಚಂದ್ರಪ್ರಭನಾಥ, ಚೌವ್ವೀಸ ತೀರ್ಥಂಕರರ ಪ್ರಭಾವಳಿಯುಳ್ಳ ಆದಿನಾಥ, ಪಾರ್ಶ್ವನಾಥ, ಕ್ರಿ.ಶ. ಸುಮಾರು ೧೪ನೆಯ ಶತಮಾನದ ಚೌವ್ವೀಸ ತೀರ್ಥಂಕರ ಮತ್ತು ೧೪೮೨ರ ನೇಮಿನಾಥ ತೀರ್ಥಂಕರನ ಶಿಲ್ಪಗಳಿವೆ. ಚಂದ್ರಪ್ರಭನಾಥ ತೀರ್ಥಂಕರನ ಪಾದಪೀಠದ ಮೇಲಿರುವ ಶಾಸನವು, ಶ್ರೀಮೂಲಸಂಘ ಸೇನಗಣದ ಪಾರಿಸಸೆಟ್ಟಿಯ

ಸುಪುತ್ರನಾದ ಬಮ್ಮಿಸೆಟ್ಟಿ ಎಂಬಾತನು ಪ್ರಸ್ತುತ ಶಿಲ್ಪವನ್ನು ಮಾಡಿಸಿಕೊಟ್ಟ ವಿವರಗಳನ್ನೊಳಗೊಂಡಿದೆ.[೮] ಇಲ್ಲಿಯ ಕೆಲವು ತೀರ್ಥಂಕರರ ಶಿಲ್ಪಗಳನ್ನು (ಪಾರ್ಶ್ವನಾಥ, ಆದಿನಾಥ ಇತ್ಯಾದಿ) ಕರ್ನಾಟಕ ವಿಶ್ವವಿದ್ಯಾಲಯದ ಕನ್ನಡ ಸಂಶೋಧನ ಸಂಸ್ಥೆಯ ವಸ್ತುಸಂಗ್ರಹಾಲಯಕ್ಕೆ ಮತ್ತು ಒಂದು ಶಿಲ್ಪವನ್ನು ಧರ್ಮಸ್ಥಳದ ಮಂಜುಷಾ ವಸ್ತುಸಂಗ್ರಹಾಲಯಕ್ಕೆ ತೆಗೆದುಕೊಂಡು ಹೋಗಲಾಗಿದೆ.

ಈ ಗ್ರಾಮದ ವಿಜಯಣ್ಣ ಮುನಿ/ಕವಿಯು ಕ್ರಿ.ಶ. ೧೪೪೮ರಲ್ಲಿ 'ದ್ವಾದಶಾನುಪ್ರೇಕ್ಷೆ' ಎಂಬ ಕಾವ್ಯವನ್ನು ರಚಿಸಿದ್ದಾನೆ. ಕನ್ನಡದಲ್ಲಿ ರಚಿತವಾದ ಬಂಧುವರ್ಮನ 'ಜೀವಸಂಬೋಧನಂ' ಎಂಬ ಕಾವ್ಯವನ್ನು ಹೊರತುಪಡಿಸಿದರೆ, ಹನ್ನೆರಡು ಅನುಪ್ರೇಕ್ಷೆಗಳ ಕುರಿತಾಗಿ ೧,೩೬೨ ಪದ್ಯಗಳಲ್ಲಿ ಸುದೀರ್ಘವಾಗಿ ಸಾಂಗತ್ಯದಲ್ಲಿ ಕಾವ್ಯವನ್ನು ರಚಿಸಿದವರಲ್ಲಿ ಈತನೇ ಮೊದಲಿಗ ನೆನಿಸಿದ್ದಾನೆ.[೯] ಆಚಾರ್ಯ ೧೦೮ ಶ್ರೀಗುಣಧರನಂದಿಮುನಿ ಮಹಾರಾಜರು ೨೦೦೧ರ ಫೆಬ್ರವರಿ ೧ರಂದು ಈ ಗ್ರಾಮದಲ್ಲಿ ಭಟ್ಟಾರಕ ಪೀಠವನ್ನು ಸ್ಥಾಪಿಸಿದ್ದಾರೆ. ಪ್ರಸ್ತುತ ಸ್ವಸ್ತಿಶ್ರೀ ಧರ್ಮಸೇನ ಭಟ್ಟಾರಕ ಪಟ್ಟಾಚಾರ್ಯರು ಈ ಪೀಠದ ಪ್ರಪ್ರಥಮ ಪಟ್ಟಾಧ್ಯಕ್ಷರಾಗಿದ್ದಾರೆ. ಇತ್ತೀಚೆಗೆ ನನ್ನ ಕ್ಷೇತ್ರಕಾರ್ಯದಲ್ಲಿ ಕ್ರಿ.ಶ. ಸುಮಾರು ೧೨ನೆಯ ಶತಮಾನದ, ಶ್ರೀ ರವಿವಾಂಡಕರ ಅವರ ಮನೆಯ ಮುಂಭಾಗದಲ್ಲಿ ಒಂದು ಸಿಂಹಪೀಠ ಮತ್ತು ಗ್ರಾಮದ ಉತ್ತರದಲ್ಲಿರುವ ಮುಳಕಮ್ಮನ ದೇವಾಲಯದಲ್ಲಿ ಪಾದಪೀಠದ ಮೇಲೆ ಶಾಸನವುಳ್ಳ ಭಗ್ನ ತೀರ್ಥಂಕರನ ಶಿಲ್ಪ ಬೆಳಕಿಗೆ ಬಂದಿದೆ. ೧೯೯೯ರಲ್ಲಿ ಹುಬ್ಬಳ್ಳಿಯ ದಿವಂಗತ ಸುವಾಸ ಭಹನ ಜೈನ ಇವರ ಪರೋಕ್ಷ ವಿನಯಾರ್ಥವಾಗಿ ಅವರ ಬಂಧುಗಳು ಮತ್ತು ಸ್ಥಳೀಯ ಶ್ರಾವಕ ಸಮುದಾಯವು ಜೊತೆಗೂಡಿ ಪ್ರಸ್ತುತ ಜಿನಾಲಯದ ಮುಂಭಾಗದಲ್ಲಿ ಮಾನಸ್ತಂಭವನ್ನು ನಿರ್ಮಿಸಿದ್ದಾರೆ.

### ೧.೨.೩ ಅಳ್ನಾವರ

ಇದು ಧಾರವಾಡದಿಂದ ಪಶ್ಚಿಮಕ್ಕೆ ೩೨ ಕಿ.ಮೀ. ಅಂತರದಲ್ಲಿದೆ. ಸ್ಥಳೀಯ ಕ್ರಿ.ಶ. ೧೦೮೧ರ ಶಾಸನವು, ಪ್ರಧಾನ ದಂಡನಾಯಕ ಮಾಚಣ್ಣನು ಕಟ್ಟಿಸಿದ್ದ ಪಾಶ್ವನಾಥ (?) ಜಿನಾಲಯ ಮತ್ತು ಇದಕ್ಕೆ ಕೆಲವು ಜನರು ದಾನ ಮಾಡಿದ ವಿವರಗಳನ್ನೊಳಗೊಂಡಿದೆ.[೧೦] ಇಲ್ಲಿಯ ಬೋಗಾರ ಓಣಿಯಲ್ಲಿ ೧೯೧೪ರಲ್ಲಿ ದೊರೆತ ಕಾಯೋತ್ಸರ್ಗ ಪಾರ್ಶ್ವನಾಥ ತೀರ್ಥಂಕರನ ಶಿಲ್ಪವನ್ನು, ಹಳಿಯಾಳ ತಾಲ್ಲೂಕಿನ ಹವಗಿಯಲ್ಲಿ ೧೯೨೧ರಲ್ಲಿ ನಿರ್ಮಾಣವಾದ ಜಿನಾಲಯದಲ್ಲಿ ಪ್ರತಿಷ್ಠಾಪಿಸಲಾಗಿದೆ. ಈ ಶಿಲ್ಪದ ಪಾದಪೀಠದ ಮೇಲಿರುವ ಶಾಸನವು, ಯಾಪನೀಯಸಂಘದ ಮೈಳಾಪಾನ್ವಯದ ಕಾರೇಯಗಣದ ಶ್ರೀ ಮಾಘನಂದಿಭಟ್ಟಾರಕದೇವ ಮುನಿಗಳ ಶಿಷ್ಯೆ ಗುಣವತಿಯವ್ವೆಯ ಗುಡ್ಡ (ಶಿಷ್ಯ) ಕೋಟರ ಕಲ್ಲಗಾವುಂಡನು ಸ್ಥಳೀಯ ನಖರ ಜಿನಾಲಯಕ್ಕೆ ಈ ಶಿಲ್ಪವನ್ನು ಮಾಡಿಸಿಕೊಟ್ಟನೆಂದು ಉಲ್ಲೇಖಿಸುತ್ತದೆ.[೧೧] ಇದು ಈ ಮೇಲಿನ ಶಾಸನೋಕ್ತ ಮಾಚಣ್ಣನು ಕಟ್ಟಿಸಿದ ಪಾಶ್ವನಾಥ ಜಿನಾಲಯವಾದಂತೆ ತೋರುತ್ತದೆ. ಈ ಜಿನಾಲಯವು ಇಂದು ಹೇಳಹೆಸರಿಲ್ಲದಂತೆ ಸಮೂಲನಾಶವಾಗಿ ಹೋಗಿದೆ.

ಹುಬ್ಬಳ್ಳಿಯ ಸಿದ್ಧಣಾಂಕನ ಸುಪುತ್ರ ಚಿಕ್ಕಮಲ್ಲಿಸೆಟ್ಟಿ ಈ ಮೇಲಿನ ಜಿನಾಲಯದಲ್ಲಿ ಸಲ್ಲೇಖನ ವ್ರತವನ್ನು ಸ್ವೀಕರಿಸಿ ೨೧ ದಿನ ಉಪವಾಸವಿದ್ದು, ಕ್ರಿ.ಶ. ೧೫೦೬ರಲ್ಲಿ ದೇಹತ್ಯಾಗ

ಮಾಡಿದ ಪರೋಕ್ಷ ವಿನಯಾರ್ಥವಾಗಿ ನಡೆಸಿದ ನಿಷಿಧಿ ಶಾಸನಶಿಲ್ಪವು, ತಿಲಕನಗರದಲ್ಲಿರುವ ಧನಲಕ್ಷ್ಮಿ ಕಟ್ಟಿಗೆ ಕೊರೆಯುವ ಗಿರಣಿಯ ಆವರಣದಲ್ಲಿದೆ.[೧೨] ಈತನು ಕ್ರಿ.ಶ. ೧೪೯೨ರಲ್ಲಿ ೨೪ ಸಂಧಿ ಮತ್ತು ೨,೧೯೨ ಪದ್ಯಗಳುಳ್ಳ 'ಸಮ್ಯಕ್ತ್ವಕೌಮುದಿ' ಎಂಬ ಕಾವ್ಯವನ್ನು ಸಾಂಗತ್ಯ ರೂಪದಲ್ಲಿ ರಚಿಸಿದ್ದಾನೆ.[೧೩] ಇದು ಸಂಸ್ಕೃತದಲ್ಲಿ ಸಮೃದ್ಧವಾಗಿ ಬೆಳೆದುಬಂದ ಸಮ್ಯಕ್ತ್ವಕೌಮುದಿ ಕಥಾ ಪರಂಪರೆಯನ್ನು ಕನ್ನಡದಲ್ಲಿ ಪ್ರಪ್ರಥಮವಾಗಿ ಪರಿಚಯಿಸಿದ ಕಾವ್ಯವೆಂಬ ಕೀರ್ತಿಗೆ ಪಾತ್ರವಾಗಿದೆ. ಈ ಕಾವ್ಯದಲ್ಲಿ ತನ್ನ ಆರಾಧ್ಯ ದೈವನಾದ ಸ್ಥಳೀಯ 'ಮತ್ತಿಯ ಜಿನಚಂದ್ರ'ನನ್ನು ಗೌರವಪೂರ್ವಕವಾಗಿ ಸ್ಮರಿಸಿದ್ದಾನೆ.

**೧.೨.೪ ಉಪ್ಪಿನಬೆಟಗೇರಿ**

ಇದು ಧಾರವಾಡದಿಂದ ಉತ್ತರಕ್ಕೆ ೧೫ ಕಿ.ಮೀ. ಅಂತರದಲ್ಲಿದೆ. ಸ್ಥಳೀಯ ಪಾರ್ಶ್ವನಾಥನ ಜಿನಾಲಯದಲ್ಲಿ ಕ್ರಿ.ಶ. ಸುಮಾರು ೧೨ನೆಯ ಶತಮಾನದ ಚೌವ್ವೀಸ ತೀರ್ಥಂಕರನ ಚಿಕ್ಕ ಶಿಲ್ಪವಿದೆ.

**೧.೨.೫ ಕನಕೂರು**

ಇದು ಧಾರವಾಡದಿಂದ ಪೂರ್ವಕ್ಕೆ ೧೭ ಕಿ.ಮೀ. ಅಂತರದಲ್ಲಿದೆ. ಸ್ಥಳೀಯ ಹಳ್ಳದ ತಟದಲ್ಲಿ ೨೦ ವರ್ಷಗಳ ಹಿಂದೆ ಕೂಷ್ಮಾಂಡಿನಿಯ (ಅಂಬಿಕೆ) ಶಿಲ್ಪ ದೊರೆತಿದೆ. ಇದನ್ನು ಪಾಂಡುರಂಗ ದೇವಾಲಯದಲ್ಲಿ ಪ್ರತಿಷ್ಠಾಪಿಸಲಾಗಿದೆ. ಇವಳು ವರ್ತಮಾನದ ಕಾಲದ ೨೨ನೆಯ ತೀರ್ಥಂಕರ ನೇಮಿನಾಥನ ಯಕ್ಷಿ. ಕನ್ನಡನಾಡಿನ ಕೂಷ್ಮಾಂಡಿನಿ ಶಿಲ್ಪಗಳ ಪ್ರತಿಮಾ ಲಕ್ಷಣಗಳ ಅಧ್ಯಯನದ ದೃಷ್ಟಿಯಿಂದ ಅಪರೂಪವಾಗಿದೆ.

**೧.೨.೬ ಕೊಟಬಾಗಿ**

ಇದು ಧಾರವಾಡದಿಂದ ವಾಯುವ್ಯಕ್ಕೆ ೩೦ ಕಿ.ಮೀ. ಅಂತರದಲ್ಲಿದೆ. ಈ ಗ್ರಾಮದ ದಕ್ಷಿಣಭಾಗದ ಅಂಚಿನಲ್ಲಿ ಕ್ರಿ.ಶ. ಸುಮಾರು ೧೨ನೆಯ ಶತಮಾನದ ಜಿನಾಲಯವೊಂದು ಅಸ್ತಿತ್ವದಲ್ಲಿತ್ತು.[೧೪] ಇದು ಭಗ್ನವಾದ ತರುವಾಯ ಮಣ್ಣಿನಿಂದ ನಿರ್ಮಿಸಲಾಗಿತ್ತು. ಇದೂ ಸಹ ಭಗ್ನವಾದ ತರುವಾಯ ಗ್ರಾಮದ ಉತ್ತರಭಾಗದ ಅಂಚಿನಲ್ಲಿ ೧೯೮೨ರಲ್ಲಿ ಜಿನಾಲಯವನ್ನು ನಿರ್ಮಿಸಲಾಗಿದೆ. ಇದರ ಮುಂಭಾಗದಲ್ಲಿ ಕ್ರಿ.ಶ. ಸುಮಾರು ೧೨ನೆಯ ಶತಮಾನದ ಕಾಯೋತ್ಸರ್ಗದಲ್ಲಿರುವ ತೀರ್ಥಂಕರರ ಎರಡು ಮತ್ತು ಒಂದು ಚೌವ್ವೀಸ ತೀರ್ಥಂಕರರ, ಕ್ರಿ.ಶ. ಸುಮಾರು ೧೬ನೆಯ ಶತಮಾನದ ಚೌವ್ವೀಸ ತೀರ್ಥಂಕರರ ಮತ್ತು ಕಾಯೋತ್ಸರ್ಗದಲ್ಲಿರುವ ಪಾರ್ಶ್ವನಾಥ ತೀರ್ಥಂಕರ ಶಿಲ್ಪಗಳಿವೆ. ಇವು ಮುಂಚೆ ಪ್ರಾಚೀನ ಜಿನಾಲಯದ ಸ್ಥಳದಲ್ಲಿದ್ದವು. ಇವುಗಳಲ್ಲಿ ಕ್ರಿ.ಶ. ಸುಮಾರು ೧೨ನೆಯ ಶತಮಾನದ ಚೌವ್ವೀಸ ತೀರ್ಥಂಕರರ ಶಿಲ್ಪದ ಪಾದಪೀಠದ ಮೇಲಿರುವ ಶಾಸನವು, ಶ್ರೀಮೂಲಸಂಘದ ಕಾಣೂರಗಣದ ಗುಡಿಯೋಳೆ (?) ಗ್ರಾಮದ ಕೇತಿಸೆಟ್ಟಿಯ ಧರ್ಮಪತ್ನಿ (ಹೆಸರಿನ ಉಲ್ಲೇಖವಿಲ್ಲ) ಪುಷ್ಪಾಂಜಳಿ ನೋಂಪಿಯನ್ನು ಆಚರಿಸಿ ಪ್ರಸ್ತುತ ಶಿಲ್ಪವನ್ನು ಮಾಡಿಸಿಕೊಟ್ಟ ವಿವರಗಳನ್ನೊಳಗೊಂಡಿದೆ.[೧೫] ಕ್ರಿ.ಶ. ಸುಮಾರು ೧೫ನೆಯ ಶತಮಾನದ ಚೌವ್ವೀಸ ತೀರ್ಥಂಕರರ ಶಿಲ್ಪದ ಮೇಲಿರುವ ಶಾಸನವು, ಶ್ರೀಮೂಲಸಂಘದ ದೇಸೀಯಗಣದ ಸೋಮಶ್ರೀ ಕಂತಿಯ ಗುಡ್ಡಿ (ಹೆಸರಿನ ಉಲ್ಲೇಖವಿಲ್ಲ)

ಪ್ರಸ್ತುತ ಶಿಲ್ಪವನ್ನು ಮಾಡಿಸಿಕೊಟ್ಟ ವಿವರಗಳನ್ನೊಳಗೊಂಡಿದೆ.[೧೬] ಪ್ರಸ್ತುತ ಜಿನಾಲಯದ ಮುಂಭಾಗದಲ್ಲಿ ಆಚಾರ್ಯ ೧೦೮ ಶ್ರೀ ಕುಲಭೂಷಣಮುನಿ ಮಹಾರಾಜರ ಪರೋಕ್ಷ ವಿನಯಾರ್ಥವಾಗಿ ನಿಷಿಧಿ ಪಾದಗಟ್ಟೆಯನ್ನು ನಿರ್ಮಿಸಲಾಗಿದೆ.

### ೧.೨.೭ ಗರಗ

ಇದು ಧಾರವಾಡದಿಂದ ವಾಯುವ್ಯಕ್ಕೆ ೧೫ ಕಿ.ಮೀ. ಅಂತರದಲ್ಲಿದೆ. ಸ್ಥಳೀಯ ಕ್ರಿಶ. ೧೨೮೭ರ ಶಾಸನವು, ದೇವಗಿರಿಯ ಯಾದವ ಮನೆತನದ ರಾಮಚಂದ್ರದೇವನ ಮಹಾಮಂಡಳೇಶ್ವರ (ಹೆಸರು ತ್ರುಟಿತವಾಗಿದೆ) ಜಿನಾಲಯಕ್ಕೆ (ಹೆಸರು ತ್ರುಟಿತವಾಗಿದೆ) ಭೂಮಿಯನ್ನು ದಾನ ಮಾಡಿದ ವಿವರಗಳನ್ನೊಳಗೊಂಡಿದೆ.[೧೭] ಇಂದು ಸಂಪೂರ್ಣ ಜೀರ್ಣೋದ್ಧಾರವಾಗಿರುವ ಶಾಂತಿನಾಥನ ಜಿನಾಲಯವೇ ಪ್ರಾಯಶಃ ಈ ಶಾಸನೋಕ್ತ ಜಿನಾಲಯವಾಗಿರುವಂತೆ ತೋರುತ್ತದೆ. ಈ ಜಿನಾಲಯದಲ್ಲಿ ಕ್ರಿಶ. ಸುಮಾರು ೧೬ನೆಯ ಶತಮಾನದ ಚಂದ್ರಪ್ರಭನಾಥ ತೀರ್ಥಂಕರನ ಚಿಕ್ಕ ಶಿಲ್ಪವಿದೆ. ಸ್ಥಳೀಯ ಹೆಗ್ಗೇರೆಯ ಏರಿಯ ಮೇಲೆ ಎರಡು ನಿಷಿಧಿ ಶಾಸನಶಿಲ್ಪಗಳಿವೆ. ಇವುಗಳಲ್ಲಿ ಒಂದು, ಕ್ರಿಶ. ೧೨೯೦ರಲ್ಲಿ ಸಮಾಧಿ ವಿಧಿಯಿಂದ ಮುಡಿಪಿ ಮೋಕ್ಷವನ್ನು ಸಂಪಾದಿಸಿದ ಯಾಪನೀಯಸಂಘದ ಕುಮುದಿಗಣದ ಶ್ರೀ ಶಾಂತಿವೀರದೇವ ಮುನಿಯ, ಮತ್ತೊಂದು (ಅಪೂರ್ಣ ಶಾಸನ), ಕ್ರಿಶ. ಸುಮಾರು ೧೩ನೆಯ ಶತಮಾನದಲ್ಲಿ ಸಮಾಧಿಮರಣವನ್ನಪ್ಪಿದ ಯಾಪನೀಯ ಸಂಘದ ಕುಮುದಿಗಣದ ಬೆಳಿದಿಗೆಯ (?) ಮುನಿ/ಶ್ರಾವಕನ ವಿವರಗಳನ್ನೊಳಗೊಂಡಿದೆ.[೧೮] ಸ್ಥಳೀಯ ಜಯಕೀರ್ತಿ ವಿದ್ಯಾಲಯದ ಆವರಣದಲ್ಲಿ, ಆಚಾರ್ಯ ೧೦೮ ಶ್ರೀ ಕುಲಭೂಷಣ ಮತ್ತು ಆಚಾರ್ಯ ೧೦೮ ಶ್ರೀ ಸಿದ್ಧಸೇನ ಮುನಿಗಳ ಪರೋಕ್ಷ ವಿನಯಾರ್ಥವಾಗಿ ನಿಷಿಧಿ ಮಂಟಪಗಳನ್ನು ನಿರ್ಮಿಸಲಾಗಿದೆ. ಇಲ್ಲು ಕಳೆದ ದಶಕದಲ್ಲಿ ಮಹಾವೀರನ ಜಿನಾಲಯವನ್ನು ನಿರ್ಮಿಸಲಾಗಿದೆ.

### ೧.೨.೮ ತಡಕೋಡ

ಇದು ಧಾರವಾಡದಿಂದ ವಾಯುವ್ಯಕ್ಕೆ ೨೦ ಕಿ.ಮೀ. ಅಂತರದಲ್ಲಿದೆ. ಇಲ್ಲಿ ಕ್ರಿಶ. ಸುಮಾರು ೧೨ನೆಯ ಶತಮಾನದಲ್ಲಿ ನಿರ್ಮಾಣವಾದ ಚಂದ್ರಪ್ರಭನಾಥನ ಜಿನಾಲಯವು, ಯಾವುದೋ ಒಂದು ಕಾಲಘಟ್ಟದಲ್ಲಿ ವೈಷ್ಣವ ಪರಂಪರೆಯ ಚಿದಂಬರೇಶ್ವರ ದೇವಾಲಯವಾಗಿ ಪರಿವರ್ತಿತವಾಗಿದೆ. ಇದರ ತಲವಿನ್ಯಾಸವು ಗರ್ಭಗೃಹ, ಅಂತರಾಳ ಮತ್ತು ನವರಂಗದಿಂದ ಕೂಡಿದೆ. ಗರ್ಭಗೃಹ ಮತ್ತು ಅಂತರಾಳದ ದ್ವಾರಬಂಧಗಳ ಲಲಾಟಪಟ್ಟಿಕೆಗಳಲ್ಲಿ ಜಿನನ ಉಬ್ಬುಶಿಲ್ಪಗಳಿವೆ. ನವರಂಗದಲ್ಲಿರುವ ಎರಡೂ ದೇವಕೋಷ್ಠಗಳ ಪಟ್ಟಿಕೆಗಳ ಮೇಲೆ ಶಾಸನಗಳಿವೆ. ಇವುಗಳಲ್ಲಿ ಒಂದು, ಕ್ರಿಶ. ೧೨೮೩ರಲ್ಲಿ ದೇವರಿಗಿಯ ಯಾದವ ಮನೆತನದ ರಾಮಚಂದ್ರದೇವನ ಆಳ್ವಿಕೆಯ ಸಂದರ್ಭದಲ್ಲಿ, ಕನ್ನರದೇವನ ಪಟ್ಟದರಸಿಯ ಇಚ್ಛೆಯಂತೆ ಮಹಾಪ್ರಧಾನ ಮಾಯಿದೇವನ ಆಜ್ಞೆಯ ಮೇರೆಗೆ ದಾನ ಮಾಡಿದ ಹಾಗೂ ಇನ್ನೊಂದು, ಯಾಪನೀಯ ಸಂಘದ ಸ್ವರ್ಣಪಾಷಾಣಗಚ್ಛದ ವೃಕ್ಷಮೂಲಗಣದ ಶ್ರೀ ವಾಸುಪೂಜ್ಯ ಮುನಿಗಳನ್ನು ಶ್ರೀ ಚಂದ್ರಪ್ರಭನಾಥ ತೀರ್ಥಂಕರನು ಕಾಪಾಡಲಿ ಎಂದು ಶುಭೇಚ್ಛೆಯನ್ನು ಕೋರಲಾದ ವಿವರಗಳನ್ನೊಳಗೊಂಡಿವೆ.[೧೯]

ಸ್ಥಳೀಯ ಪಾರ್ಶ್ವನಾಥ ಜಿನಾಲಯವು, ಕ್ರಿಶ. ಸುಮಾರು ೧೨ನೆಯ ಶತಮಾನದಲ್ಲಿ ನಿರ್ಮಾಣವಾಗಿದೆ. ಕಾಲಾಂತರದಲ್ಲಿ ಇದು ಭಗ್ನವಾದ ತರುವಾಯ ಇದನ್ನು ಕಟ್ಟಿಗೆ ಮತ್ತು ಮಣ್ಣನ್ನು ಬಳಸಿಕೊಂಡು ಜೀರ್ಣೋದ್ಧಾರ ಪಡಿಸಲಾಯಿತು. ಈಗ ಮತ್ತೆ ಆಧುನಿಕ ಶೈಲಿಯಲ್ಲಿ ಜೀರ್ಣೋದ್ಧಾರಪಡಿಸಲಾಗುತ್ತಿದೆ. ಈ ಜಿನಾಲಯದಲ್ಲಿರುವ ಕ್ರಿಶ. ಸುಮಾರು ೧೨ನೆಯ ಶತಮಾನದ ಕಾಯೋತ್ಸರ್ಗದಲ್ಲಿರುವ ಪಾರ್ಶ್ವನಾಥ ತೀರ್ಥಂಕರನ ಶಿಲ್ಪದ ಪಾದಪೀಠದ ಮೇಲಿರುವ ಶಾಸನವು, ದ್ರವಿಳಸಂಘದ ಶ್ರೀ ಅಜಿತಸೇನಪಂಡಿತದೇವ ಮುನಿಗಳ ಗುಡ್ಡನೂ ಮತ್ತು ಮೈಳಲಮಹಾದೇವಿಯ ಪೆಗ್ಗಡೆಯೂ ಆದ ಸಿಂಗಣಯ್ಯ ಎಂಬಾತನು ಶ್ರೀಮತಿಯವ್ವೆ ಕಂತಿಗೆ ಪ್ರಸ್ತುತ ಶಿಲ್ಪವನ್ನು ಮಾಡಿಸಿಕೊಟ್ಟ ವಿವರಗಳನ್ನೊಳಗೊಂಡಿದೆ.[೨೦] ಇದೇ ಸ್ಥಳದಲ್ಲಿರುವ ಸಮಕಾಲೀನ ಪರ್ಯಂಕಾಸನದಲ್ಲಿರುವ ಆದಿನಾಥ ತೀರ್ಥಂಕರನ ಶಿಲ್ಪದ ಪಾದಪೀಠದ ಮೇಲಿರುವ ಶಾಸನವು, ಮೂಲಸಂಘದ ಶ್ರೀ ವೀರಣಂದಿ ಸಿದ್ಧಾಂತಚಕ್ರವರ್ತಿದೇವ ಮುನಿಗಳ ಗುಡ್ಡ ಮೇಧಾವಿಯಣ್ಣನ ಮಗಳು ಚಾಮವ್ವೆ ಎಂಬಾತಳು ಅಣತಿಯ ನೋಂಪಿಯನ್ನು (ಇದು ೧೪ನೆಯ ತೀರ್ಥಂಕರನಾದ ಅನಂತನಾಥನಿಗೆ ಸಂಬಂಧಿಸಿದ ನೋಂಪಿ) ಆಚರಿಸಿ ಪ್ರಸ್ತುತ ಶಿಲ್ಪವನ್ನು ಮಾಡಿಸಿಕೊಟ್ಟ ವಿವರಗಳನ್ನೊಳಗೊಂಡಿದೆ.[೨೧] ಈ ಜಿನಾಲಯದ ಆವರಣದಲ್ಲಿ ಸಮಕಾಲೀನ ಪಾರ್ಶ್ವನಾಥ, ಚೌವ್ವೀಸ ತೀರ್ಥಂಕರರ ಶಿಲ್ಪ, ಆದಿನಾಥ, ಪದ್ಮಾವತಿ ಮೊದಲಾದ ಭಗ್ನ ಶಿಲ್ಪಾವಶೇಷಗಳು ಹರಡಿಕೊಂಡಿವೆ. ಇವುಗಳಲ್ಲಿ ಪರ್ಯಂಕಾಸನ ದಲ್ಲಿರುವ ಪಾರ್ಶ್ವನಾಥ ತೀರ್ಥಂಕರನ ಶಿಲ್ಪದ ಪಾದಪೀಠದ ಮೇಲಿರುವ ಶಾಸನವು, ಕಂಡೂರುಗಣದ ಶ್ರೀ ಮುನಿಚಂದ್ರ ಮುನಿಗಳ ಶಿಷ್ಯೆ ಚಂದ್ರಮೋನಿ ಕಂತಿ ಈ ಶಿಲ್ಪವನ್ನು ಮಾಡಿಸಿದ (?) ವಿವರಗಳನ್ನೊಳಗೊಂಡಿದೆ.[೨೨]

### ೧.೨.೯ ಧಾರವಾಡ

ಇದು ಕುಂದೂರ ಐನೂರು ಪ್ರಾಂತದ ಧಾರವಾಡ ಪನ್ನೆರಡು ಉಪಪ್ರಾಂತದ (ಕಂಪಣ) ಮುಖ್ಯ ಪಟ್ಟಣವಾಗಿತ್ತು. ಈ ನಗರದ ಹೊಸಯಲ್ಲಾಪುರ ಬಡಾವಣೆಯಲ್ಲಿ ಕ್ರಿಶ. ಸುಮಾರು ೧೧ನೆಯ ಶತಮಾನದಲ್ಲಿ ಜಿನಾಲಯವೊಂದು ಅಸ್ತಿತ್ವದಲ್ಲಿತ್ತು. ಇದನ್ನು ಇತ್ತೀಚೆಗೆ ಇಲ್ಲಿ ಬೆಳಕಿಗೆ ಬಂದ ಕ್ರಿಶ. ಸುಮಾರು ೧೨ನೆಯ ಶತಮಾನದ ತ್ರುಟಿತ ಶಾಸನವು ಪರೋಕ್ಷವಾಗಿ ದೃಢಪಡಿಸುತ್ತದೆ.[೨೩] ಅದು ಭಗ್ನವಾದ ತರುವಾಯ ಕ್ರಿಶ. ಸುಮಾರು ೧೮ನೆಯ ಶತಮಾನದಲ್ಲಿ ಕಟ್ಟಿಗೆ ಮತ್ತು ಮಣ್ಣನ್ನು ಬಳಸಿಕೊಂಡು ಜೀರ್ಣೋದ್ಧಾರಪಡಿಸಲಾಯಿತು. ಇದನ್ನು ೧೯೮೩ರಲ್ಲಿ ಆಧುನಿಕ ಶೈಲಿಯಲ್ಲಿ ನಿರ್ಮಿಸಲಾಗಿದೆ. ಇದರ ಮುಂಭಾಗದಲ್ಲಿ, ಶ್ರೀಮತಿ ರೇಣುಕಾಬಾಯಿ ನಾಭಿರಾಜ ಬೋಗಾರ ಅವರು ೧೯೯೪ರಲ್ಲಿ ಮಾನಸ್ತಂಭವನ್ನು ನಿರ್ಮಿಸಿದ್ದಾರೆ. ಈ ಜಿನಾಲಯದಲ್ಲಿ ಕ್ರಿಶ. ಸುಮಾರು ೧೨ನೆಯ ಶತಮಾನದ ತೀರ್ಥಂಕರರ ಎರಡು ಮತ್ತು ಪದ್ಮಾವತಿಯ ಒಂದು ಶಿಲ್ಪ ಇದೆ.

ಈ ನಗರದ ಪೊಲೀಸ್ ಕಛೇರಿಯ ಹಿಂಭಾಗದ ಮಹಾತ್ಮಾಗಾಂಧೀಜಿ ಉದ್ಯಾನವನದಲ್ಲಿ ಕ್ರಿಶ. ಸುಮಾರು ೧೨ನೆಯ ಶತಮಾನದ ವಾಸ್ತುಶಿಲ್ಪಾವಶೇಷಗಳು ಹರಡಿಕೊಂಡಿವೆ. ಇವುಗಳಲ್ಲಿ ಸಮಕಾಲೀನ ಕಾಯೋತ್ಸರ್ಗದಲ್ಲಿರುವ ಪಾರ್ಶ್ವನಾಥ ತೀರ್ಥಂಕರನ ಶಿಲ್ಪವಿದೆ. ಪ್ರಾಯಶಃ

ಇಲ್ಲಿ ಕ್ರಿ.ಶ. ಸುಮಾರು ೧೨ನೆಯ ಶತಮಾನದಲ್ಲಿ ಜಿನಾಲಯವೊಂದು ಅಸ್ತಿತ್ವದಲ್ಲಿದ್ದಂತೆ ತೋರುತ್ತದೆ ಎಂಬುದು ಪರಿಶೀಲನಾರ್ಹವಾಗಿದೆ.

### ೧.೨.೧೦ ನರೇಂದ್ರ

ಇದು ಧಾರವಾಡದಿಂದ ವಾಯುವ್ಯಕ್ಕೆ ೬ ಕಿ.ಮೀ. ಅಂತರದಲ್ಲಿದೆ. ಇದು ಕುಂದೂರ ಐನೂರು ಪ್ರಾಂತದ ಮುಖ್ಯ ಪಟ್ಟಣ ಮತ್ತು ರಾಜಧಾನಿಯಾಗಿತ್ತು. ಗೋವೆ ಕದಂಬ ಮನೆತನದ ಇಮ್ಮಡಿ ಜಯಕೇಸಿಯ ಸ್ಥಳೀಯ ಕ್ರಿಶ ೧೧೨೫ರ ಶಾಸನವು, ಲಕ್ಷ್ಮಣೇಶ್ವರ ದೇವಾಲಯಕ್ಕೆ ದಾನ ಮಾಡಿದ ಭೂಮಿಯ ಮೇರೆಯನ್ನು ಸೂಚಿಸುತ್ತ, 'ಬಡಗಲು ಬೆಟ್ಟದ ಬಸದಿಯ ಭೂಮಿ' ಎಂದು ಉಲ್ಲೇಖಿಸುತ್ತದೆ.[೨೪] ಇದೇ ಅರಸನ ಕ್ರಿ.ಶ. ಸುಮಾರು ೧೨ನೆಯ ಶತಮಾನದ ಶಾಸನವು, ಸ್ಥಳೀಯ ನಂದೇಶ್ವರ ದೇವಾಲಯಕ್ಕೆ ದಾನ ಮಾಡಿದ ಭೂಮಿಯ ಮೇರೆಯನ್ನು ಸೂಚಿಸುತ್ತ, 'ಕೀರ್ತಿ ಜಿನಾಲಯದ ತೋಟ' ಎಂದು ಉಲ್ಲೇಖಿಸುತ್ತದೆ.[೨೫] ಇದರಿಂದ ಸ್ಥಳೀಯ ಬೆಟ್ಟದ ಮೇಲೆ ಕೀರ್ತಿ ಜಿನಾಲಯ ಎಂಬ ನಾಮಾಂಕಿತ ಜಿನಾಲಯವೊಂದು ಅಸ್ತಿತ್ವದಲ್ಲಿತ್ತೆಂಬ ವಿಚಾರ ಸ್ಪಷ್ಟವಾಗುತ್ತದೆ. ಇದು ಇಂದು ಹೇಳಹೆಸರಿಲ್ಲದಂತೆ ಸಮೂಲನಾಶವಾಗಿ ಹೋಗಿದೆ. ಈ ಮೇಲಿನ ಕ್ರಿ.ಶ. ೧೧೨೫ರ ಶಾಸನದಲ್ಲಿ, 'ಪಡವಲು ಸವಣಸಪಳ್ಳಿ' ಎಂಬ ಹಳ್ಳಿಯ ಪ್ರಸ್ತಾಪ ಬಂದಿದೆ. ಪ್ರಸ್ತುತ ಗ್ರಾಮದ ಪಶ್ಚಿಮದಲ್ಲಿದ್ದ ಈ ಹಳ್ಳಿಯು ಇಂದು ನಾಮಾವಶೇಷವಾಗಿದೆ. ಇದು ಸಂಸ್ಕೃತದ ಶ್ರವಣ ಪದದ ತದ್ಭವ ರೂಪವಾಗಿದೆ. ಕನ್ನಡನಾಡಿನ ಅನೇಕ ಶಾಸನಗಳಲ್ಲಿ ಉಲ್ಲೇಖಿತ ಇಂತಹ ಸ್ಥಳನಾಮಗಳು ಆಯಾ ಪ್ರದೇಶದ ಜಿನಮುನಿಗಳ ಮತ್ತು ಧಾರ್ಮಿಕ ಪರಂಪರೆಯನ್ನರಿಯುವ ಕನ್ನಡಿಯಾಗಿವೆ.

ಸ್ಥಳೀಯ ಕ್ರಿ.ಶ. ಸುಮಾರು ೧೨ನೆಯ ಶತಮಾನದ ನಿಷಿಧಿ ಶಾಸನವು, ಯಾಪನೀಯ ಸಂಘದ ಕಾರೇಯಗಣದ ಶ್ರೀ ಕನಕಶಾಂತಿಸಿದ್ಧಾಂತ ಮುನಿಗಳು ಸಲ್ಲೇಖನ ವ್ರತವನ್ನು ಸ್ವೀಕರಿಸಿ ದೇಹತ್ಯಾಗ ಮಾಡಿ ಮುಕ್ತಿಯನ್ನು ಸಂಪಾದಿಸಿದ ಪರೋಕ್ಷ ವಿನಯಾರ್ಥವಾಗಿ ಅವರ ಶಿಷ್ಯ ಶ್ರೀ ಬಾಹುಬಲಿ ಮುನಿಗಳು ನಿಷಿಧಿ ಶಾಸನಶಿಲ್ಪವನ್ನು ನಿಲ್ಲಿಸಿದ ವಿವರಗಳನ್ನೊಳಗೊಂಡಿದೆ.[೨೬]

### ೧.೨.೧೧. ನುಗ್ಗಿಕೇರಿ

ಇದು ಧಾರವಾಡದಿಂದ ದಕ್ಷಿಣಕ್ಕೆ ೧೦ ಕಿ.ಮೀ. ಅಂತರದಲ್ಲಿದೆ. ೧೯೭೪ರಲ್ಲಿ ಇಲ್ಲಿ ದೊರೆತ ಚೌವ್ವೀಸ ತೀರ್ಥಂಕರರ ಪ್ರಭಾವಳಿಯುಳ್ಳ ಆದಿನಾಥ ತೀರ್ಥಂಕರನ (ಮೇಲರ್ಧ ಭಾಗವು ಒಡೆದು ಹೋಗಿದೆ) ಶಿಲ್ಪವನ್ನು, ಕರ್ನಾಟಕ ವಿಶ್ವವಿದ್ಯಾಲಯದ ಪ್ರಾಚೀನ ಭಾರತೀಯ ಇತಿಹಾಸ ಮತ್ತು ಶಾಸನವಿಜ್ಞಾನ ವಿಭಾಗದಲ್ಲಿ ತಂದಿಡಲಾಗಿದೆ. ಕ್ರಿ.ಶ. ಸುಮಾರು ೧೨ನೆಯ ಶತಮಾನದ ಈ ಶಿಲ್ಪದ ಪೀಠದ ಮೇಲಿರುವ ಶಾಸನವು, ಮೈಳಾಪಾನ್ವಯದ ಕಾರೇಯಗಣದ ಗುಡ್ಡರಾದ ಕೇಮಣ ಮತ್ತು ರೇಚಣ ಎಂಬಾತರು ಜೊತೆಗೂಡಿ ಜೀರ್ಣೋದ್ಧಾರಪಡಿಸಿದ ಚಂದ್ರಪ್ರಭನಾಥನ ಜಿನಾಲಯದ ಅಷ್ಟವಿಧಾರ್ಚನೆಗೆ ಅರುವತ್ತೊಕ್ಕಲರು ಮತ್ತು ಉಗುರಮುನ್ನೂರ್ವರು ಜೊತೆಗೂಡಿ ಹಣವನ್ನು ದಾನ ಮಾಡಿದ ವಿವರಗಳನ್ನೊಳಗೊಂಡಿದೆ.[೨೭]

### ೧.೨.೧೨ ಮನಗುಂಡಿ

ಇದು ಧಾರವಾಡದಿಂದ ನೈರುತ್ಯಕ್ಕೆ ೧೦ ಕಿ.ಮೀ. ಅಂತರದಲ್ಲಿದೆ. ಇಲ್ಲಿ ಇತ್ತೀಚೆಗೆ ನನ್ನ ಕ್ಷೇತ್ರಕಾರ್ಯದಲ್ಲಿ ಬೆಳಕಿಗೆ ಬಂದ ಗೋವೆ ಕದಂಬ ಮನೆತನದ ಮುಮ್ಮಡಿ ಗೂವಲದೇವನ ಕ್ರಿ.ಶ. ೧೦೮೦ ಮತ್ತು ೧೦೮೮ರ ಶಾಸನವು, ಲೋಕಬ್ಬರಸಿ ಎಂಬಾತಳು ಜಿನಾಲಯವನ್ನು ನಿರ್ಮಿಸಿದ ಮತ್ತು ಇದಕ್ಕೆ ಹಲವು ಜನರು ದಾನ ಮಾಡಿದ ವಿಚಾರವನ್ನು ಉಲ್ಲೇಖಿಸುತ್ತದೆ.[೨೮] ಇದರಲ್ಲಿ ರಾಮಚಂದ್ರದೇವ, ಮುನಿಚಂದ್ರಸಿದ್ಧಾಂತದೇವ, ನರೇಂದ್ರಕೀರ್ತಿಸಿದ್ಧಾಂತ, ನಿರವಧ್ಯದೇವ, ಶುಭಚಂದ್ರದೇವ, ಗೋವರ್ಧನತ್ರೈವಿದ್ಯದೇವ, ಅನಂತವೀರ್ಯಪಂಡಿತ, ದಾವಣಂದಿಭಟ್ಟಾರಕದೇವ, ನಾಗವೀರದೇವ, ರವಿಕೀರ್ತಿ, ದೇವಸಿರಿಕಂತಿ, ಚಾರುಮತಿಯಬ್ಬೆ, ಜಿನಮತಿಯಬ್ಬೆ ಮುನಿ–ಕಂತಿಯರ ಪ್ರಸ್ತಾಪಗಳು ಬಂದಿವೆ. ಇದೇ ಗ್ರಾಮದ ಗೋವೆ ಕಾದಂಬ ಮನೆತನದ ಮುಮ್ಮಡಿ ಜಯಕೇಶಿ ಮತ್ತು ಮುಮ್ಮಡಿ ವಜ್ರದೇವನ ಆಳ್ವಿಕೆಯ ಕಾಲಾವಧಿಯ ಕ್ರಿ.ಶ. ೧೨೦೩, ೧೨೧೫, ೧೨೧೭ ಮತ್ತು ೧೨೨೧ರ ಶಾಸನವು, 'ನಗರ ಜಿನಾಲಯ'ವನ್ನು ಮತ್ತು ಇದಕ್ಕೆ ಹಲವು ಜನರು ದಾನ ಮಾಡಿದ ಸಂಗತಿಯನ್ನು ಪ್ರಸ್ತಾಪಿಸುತ್ತದೆ.[೨೯] ಇದನ್ನು 'ಜೋಗವಟ್ಟಿಗೆ ಜಿನಾಲಯ' ಎಂತಲೂ ಕರೆಯಲಾಗಿದೆ. ಇದರಿಂದ ಈ ಜಿನಾಲಯವು ಶೈವ ಧರ್ಮೀಯರ ರಕ್ಷಣೆಯಲ್ಲಿತ್ತೆಂಬ ವಿಚಾರ ಸ್ಪಷ್ಟವಾಗುತ್ತದೆ. ಈ ಶಾಸನದಲ್ಲಿ ರಾಮಚಂದ್ರದೇವ, ಶಶಾಂಕವೀರ ಮುನಿಗಳ ಪ್ರಸ್ತಾಪಗಳು ಬಂದಿವೆ. ಸ್ಥಳೀಯ ಕಲ್ಮೇಶ್ವರ ದೇವಾಲಯದ ಪರಿಸರದಲ್ಲಿದ್ದ (?) ಈ ಶಾಸನಗಳೋಕ್ತ ಜಿನಾಲಯಗಳು ಇಂದು ಹೇಳಹೆಸರಿಲ್ಲದಂತೆ ಸಮೂಲನಾಶವಾಗಿ ಹೋಗಿವೆ. ಕಲ್ಮೇಶ್ವರ ದೇವಾಲಯದಲ್ಲಿ ತೀರ್ಥಂಕರರ ಭಗ್ನಾವಶೇಷಗಳಿವೆ.

### ೧.೨.೧೩ ಮುಗದ

ಇದು ಧಾರವಾಡದಿಂದ ಪಶ್ಚಿಮಕ್ಕೆ ೧೦ ಕಿ.ಮೀ. ಅಂತರದಲ್ಲಿದೆ. ಗೋವೆ ಕಾದಂಬರಿ ಮನೆತನದ ಕಾಲಾವಧಿಯಲ್ಲಿ ಮುಗುಂದ ಮೂವತ್ತು ಉಪಪ್ರಾಂತದ ಮುಖ್ಯಪಟ್ಟಣವಾಗಿದ್ದ ಈ ಗ್ರಾಮದಲ್ಲಿ, ಜೈನ ಸಾವಂತ ಮನೆತನ ಆಳ್ವಿಕೆ ಕೈಗೊಂಡಿದೆ. ಈ ಮನೆತನದ ಚಾವುಂಡರಾಯ ಮತ್ತು ಈತನ ಪಟ್ಟದರಸಿ ಚಟ್ಟಿಯಕ್ಕ, ನಾಗದೇವ ಮತ್ತು ಈತನ ಪಟ್ಟದರಸಿ ಪೊಲ್ಲಿಯಕ್ಕ, ಮಾರ್ತ್ತಂಡಯ್ಯ ಮತ್ತು ಈತನ ಪಟ್ಟದರಸಿ ಗೊಜ್ಜಿಯಕ್ಕ, ಇಮ್ಮಡಿ ಚಾವುಂಡ, ನಾಕರಸ, ಬಮ್ಮರಸ, ಉದಯಮಗಾವುಂಡ, ಇವರು ಈ ಪರಿಸರದಲ್ಲಿ ಜೈನ ಪರವಾದ ಸಾಂಸ್ಕೃತಿಕ ಚಟುವಟಿಕೆಗಳ ಆವಿರ್ಭಾವಕ್ಕೆ ವಿಶೇಷವಾಗಿ ಪ್ರಯತ್ನಿಸಿದ್ದಾರೆ. ಗೋವೆ ಕಾದಂಬ ಮನೆತನದ ಮುಮ್ಮಡಿ ಗೂವಲದೇವನ ಸ್ಥಳೀಯ ಕ್ರಿ.ಶ. ೧೦೪೫ರ ಶಾಸನವು, ಚಾವುಂಡರಾಯನು ಕಟ್ಟಿಸಿದ್ದ 'ಸಮ್ಯಕ್ತ್ವ ರತ್ನಾಕರ' ಜಿನಾಲಯವನ್ನು ಈತನ ಮೊಮ್ಮಗ ಮಾರ್ತ್ತಂಡಯ್ಯನು ಜೀರ್ಣೋದ್ಧಾರಪಡಿಸಿ, ಇದಕ್ಕೆ ಹೊಂದಿಕೊಂಡಂತೆ ನಾಟಕ ಶಾಲೆಯನ್ನು ನಿರ್ಮಿಸಿದ ವಿಚಾರವನ್ನು ಉಲ್ಲೇಖಿಸುತ್ತದೆ.[೩೦] ಇದು ಕನ್ನಡನಾಡಿನಲ್ಲಿ ಪ್ರಪ್ರಥಮ ನಾಟಕ ಶಾಲೆ ಎಂಬ ಕೀರ್ತಿಗೆ ಪಾತ್ರವಾಗಿದೆ. ಈ ಜಿನಾಲಯವು ಇಂದು ಜೀರ್ಣೋದ್ಧಾರವಾಗಿದೆ. ಇಲ್ಲಿರುವ ಸಮಕಾಲೀನ ಪಾರ್ಶ್ವನಾಥ ಮತ್ತು ಪದ್ಮಾವತಿಯ ಶಿಲ್ಪಗಳು ಗಮನೀಯವಾಗಿದೆ. ಪಾರ್ಶ್ವನಾಥ ತೀರ್ಥಂಕರನ ಪಾದಪೀಠದ ಮೇಲಿರುವ ಶಾಸನವು ತುಂಬಾ ತ್ರುಟಿತವಾಗಿದ್ದು, ಹೀಗಾಗಿ

ವಿವರಣೆಗಳು ಅಸ್ಪಷ್ಟವಾಗಿವೆ. ಈ ಶಿಲ್ಪವನ್ನು ಕುಮುದಿಗಣದ ಶಿಷ್ಯೆಯೊಬ್ಬಳು ಮಾಡಿಸಿಕೊಟ್ಟಂತೆ ತೋರುತ್ತದೆ.[೩೧]

ಈ ಮೇಲಿನ ಕ್ರಿ.ಶ. ೧೧೪೫ರ ಶಾಸನದಲ್ಲಿ ಬಾಳಚಂದ್ರದೇವ, ರಾಮಚಂದ್ರದೇವ, ಶಶಾಂಕವೀರ, ವಾಸುದೇವ, ಕೀರ್ತಿದೇವ, ಏಕವೀರ, ಮಹಾವೀರ, ನರೇಂದ್ರಕೀರ್ತಿಸಿದ್ಧಾಂತ, ನಾಗಬಿಕ್ಕಿವ್ರತೀಂದ್ರ, ನಿರವದ್ಯಕೀರ್ತಿ, ಪಾರ್ಶ್ವದೇವ, ಮಾಧವೇಂದ್ರ, ಮುನಿಚಂದ್ರಸಿದ್ಧಾಂತದೇವ, ರವಿಕೀರ್ತಿ, ಗೋವರ್ಧನತ್ರೈವಿದ್ಯದೇವ, ಅನಂತವೀರ್ಯಕೀರ್ತಿ, ಕುಮಾರಕೀರ್ತಿ, ದಾವನಂದಿ ಮುನಿಗಳ ಪ್ರಸ್ತಾಪಗಳಿವೆ. ಕನ್ನಡನಾಡಿನ ಜೈನಾಚಾರ್ಯರ ಪರಂಪರೆಯ ಅಧ್ಯಯನಕ್ಕೆ ಈ ಶಾಸನ ಅಪರೂಪದ ಆಕರವಾಗಿದೆ.

### ೧.೨.೧೪ ಶೇಡಬಾಳ

ಇದು ಧಾರವಾಡದಿಂದ ವಾಯವ್ಯಕ್ಕೆ ೧೮ ಕಿ.ಮೀ. ಅಂತರದಲ್ಲಿದೆ. ಈ ಗ್ರಾಮದ ಪೂರ್ವಭಾಗದ ಅಂಚಿನಲ್ಲಿರುವ ಬೆಟ್ಟವನ್ನು 'ಜಿನಮರಡಿ' ಎಂದು ಕರೆಯಲಾಗುತ್ತದೆ. ಇಲ್ಲಿ ೧೯೮೭ರಲ್ಲಿ ಶಾಸನವುಳ್ಳ ಆದಿನಾಥ ತೀರ್ಥಂಕರನ ಶಿಲ್ಪ ದೊರೆತಿದೆ. (ಇದು ಈಗ ತಡಕೋಡದ ಪಾರ್ಶ್ವನಾಥನ ಜಿನಾಲಯದಲ್ಲಿದೆ). ಈ ಬೆಟ್ಟದ ಮೇಲಿರುವ ಬನಶಂಕರಿದೇವಿ ದೇವಾಲಯದಲ್ಲಿ ಕ್ರಿ.ಶ. ಸುಮಾರು ೧೨ನೆಯ ಶತಮಾನದ ತ್ರಿಭಂಗಿಯ ಸ್ಥಾನಕ ಪದ್ಮಾವತಿಯ ಶಿಲ್ಪವಿದೆ. ಇದು ಈಗ ಬನಶಂಕರಿದೇವಿ ಎಂದು ಆರಾಧಿಸಲ್ಪಡುತ್ತಿದೆ. ಈ ದೇವಾಲಯದ ಬಲಭಾಗದ ಬೆಟ್ಟದ ಮೇಲೆ ಪ್ರಾಚೀನ ವಾಸ್ತು ಅವಶೇಷಗಳು ಹರಡಿಕೊಂಡಿವೆ. ಪ್ರಾಯಶಃ ಈ ಅವಶೇಷಗಳು ಇಲ್ಲಿದ್ದ ಪ್ರಾಚೀನ ಜಿನಾಲಯಕ್ಕೆ ಸಂಬಂಧಿಸಿರಬಹುದೇ (?) ಎಂಬುದು ಪರಿಶೀಲನಾರ್ಹ ವಾಗಿದೆ.

### ೧.೨.೧೫ ಸೈಬನಕೊಪ್ಪ

ಇದು ಧಾರವಾಡದಿಂದ ಉತ್ತರಕ್ಕೆ ೧೮ ಕಿ.ಮೀ. ಅಂತರದಲ್ಲಿದೆ. ಇತ್ತೀಚೆಗೆ ನನ್ನ ಕ್ಷೇತ್ರಕಾರ್ಯದಲ್ಲಿ ಸ್ಥಳೀಯ ಹನುಮಾನ ದೇವಾಲಯದ ಮುಂಭಾಗದಲ್ಲಿ, ಕ್ರಿ.ಶ. ಸುಮಾರು ೧೩ನೆಯ ಶತಮಾನದ ಜಿನಬಿಂಬ ಶಿಲಾಫಲಕ ಬೆಳಕಿಗೆ ಬಂದಿದೆ. ಇದು ಈ ಗ್ರಾಮದ ಸುತ್ತಮುತ್ತಲಿನ ಯಾವುದೋ ಗ್ರಾಮದ ಜಿನಾಲಯಕ್ಕೆ ಭೂದಾನ ಮಾಡಿದ ಸಂದರ್ಭದಲ್ಲಿ, ಅದರ ಮೇರೆಯನ್ನು ಸೂಚಿಸಲು ನಡೆಸಿದ ಮೇರೆಗಲ್ಲಾಗಿರುವಂತೆ ತೋರುತ್ತದೆ.

### ೧.೨.೧೬ ಹೆಬ್ಬಳ್ಳಿ

ಇದು ಧಾರವಾಡದಿಂದ ಪೂರ್ವಕ್ಕೆ ೧೨ಕಿ.ಮೀ. ಅಂತರದಲ್ಲಿದೆ. ೧೯೮೧ರಲ್ಲಿ ಸ್ಥಳೀಯ ಚಂದ್ರಪರಮೇಶ್ವರಿ ದೇವಾಲಯದ ಹಿಂಭಾಗದ ಕೆರೆಯಂಗಳದಲ್ಲಿ ಸುಮಾರು ಕ್ರಿ.ಶ.೧೧ನೆಯ ಶತಮಾನದ ಪರ್ಯಂಕಾಸನದಲ್ಲಿರುವ ತೀರ್ಥಂಕರನ ಶಿಲ್ಪ ದೊರೆತಿದೆ. ನವರಂಗ ಮಾತ್ರ ಉಳಿದುಬಂದಿರುವ ಪ್ರಸ್ತುತ ಚಂದ್ರಪರಮೇಶ್ವರಿ ದೇವಾಲಯವೇ ಸ್ಥಳೀಯ ಪ್ರಾಚೀನ ಜಿನಾಲಯ ವಾದಂತೆ ತೋರುತ್ತದೆ. ಈ ಗ್ರಾಮದ ದಕ್ಷಿಣದ ಬೆಟ್ಟದ ಮೇಲೆ ೧೯೮೧ರಲ್ಲಿ, ಸುಮಾರು ಕ್ರಿ.ಶ. ೧೫ನೆಯ ಶತಮಾನದ ಪಂಚಲೋಹದ ಕಾಯೋತ್ಸರ್ಗದಲ್ಲಿರುವ ತೀರ್ಥಂಕರನ ಪ್ರತಿಮೆ ದೊರೆತಿದೆ. ಇದನ್ನು ಕರ್ನಾಟಕ ವಿಶ್ವವಿದ್ಯಾಲಯದ ಕನ್ನಡ ಸಂಶೋಧನ ಸಂಸ್ಥೆಯ

ವಸ್ತು ಸಂಗ್ರಹಾಲಯದಲ್ಲಿ ತಂದಿಡಲಾಗಿದೆ. ಇತ್ತೀಚೆಗೆ ನನ್ನ ಕ್ಷೇತ್ರಕಾರ್ಯದಲ್ಲಿ ಈ ಮೇಲಿನ ದೇವಾಲಯದ ಪರಿಸರದಲ್ಲಿ ಸುಮಾರು ಕ್ರಿಶ. ೧೬ನೆಯ ಶತಮಾನದ ಬಾಹುಬಲಿಯ ಶಿಲ್ಪ ಬೆಳಕಿಗೆ ಬಂದಿದೆ. ಇದು ಅಪೂರ್ಣವಾಗಿದ್ದು, ತ್ರುಟಿತವಾಗಿದೆ. ಇದನ್ನು ಕರ್ನಾಟಕ ವಿಶ್ವವಿದ್ಯಾಲಯದ ಪ್ರಾಚೀನ ಭಾರತೀಯ ಇತಿಹಾಸ ಮತ್ತು ಶಾಸನವಿಜ್ಞಾನ ವಿಭಾಗದಲ್ಲಿ ತಂದಿಟ್ಟಿದ್ದೇನೆ. ಸ್ಥಳೀಯ ಕ್ರಿ.ಶ. ಸುಮಾರು ೧೩ನೆಯ ಶತಮಾನದ ತ್ರುಟಿತ ಶಾಸನವು, ಯಾಪನೀಯಸಂಘದ ಪುನ್ನಾಗವೃಕ್ಷಮೂಲಗಣದ ವಿವರಗಳನ್ನೊಳಗೊಂಡಿದೆ.[೨೨]

ಹೀಗೆ, ಈ ತಾಲ್ಲೂಕಿನ ಕೆಲವು ಗ್ರಾಮಗಳಲ್ಲಿ ಕಂಡುಬಂದಿರುವ ವಾಸ್ತುಶಿಲ್ಪಶಾಸನಾದಿ ಕುರುಹುಗಳು, ಈ ಗ್ರಾಮಗಳು ಒಂದು ಕಾಲದಲ್ಲಿ ಪ್ರಮುಖ ಜೈನಕೇಂದ್ರ ನೆಲೆಗಳಾಗಿದ್ದ ವಿಚಾರ ಮನದಟ್ಟಾಗುತ್ತದೆ. ಇಲ್ಲಿಯ ಶಾಸನೋಕ್ತ ಮುನಿಪರಂಪರೆ ಗಮನಾರ್ಹವಾಗಿದೆ. ಈ ಪ್ರದೇಶದಲ್ಲಿ ಜೈನಧರ್ಮದ ಪ್ರಸರಣಕ್ಕೆ ಇದರ ಕೊಡುಗೆ ಅಮೋಘವಾಗಿದೆ. ಈ ತಾಲ್ಲೂಕಿನ ಕೊಟಬಾಗಿಯ ಆಚಾರ್ಯ ೧೦೮ ಶ್ರೀ ವಿಮಲಸಾಗರಮುನಿ, ನವಲೂರದ ಸ್ವಸ್ತಿಶ್ರೀ ೧೦೫ ಅತಿಬಲ ಮಹಾರಾಜರು ಮತ್ತು ಸುವ್ರತಾದೇವಿ ಕಂತಿ, ಅಮ್ಮಿನಬಾವಿಯ ಬ್ರಹ್ಮಚಾರಿ ಚಾಮಪ್ಪ ಅವರು ಧರ್ಮಪ್ರಭಾವನೆ ಕೈಗೊಂಡು ಮುಕ್ತಿಯನ್ನು ಸಂಪಾದಿಸಿದ್ದಾರೆ. ಪ್ರಸ್ತುತ ಗರಗದ ಆಚಾರ್ಯ ೧೦೮ ಶ್ರೀ ಸಿದ್ಧಸೇನಮುನಿ, ಕ್ಷುಲ್ಲಕ ೧೦೫ ಶ್ರೀ ಧ್ಯಾನೇಶ್ವರ ಮಹಾರಾಜರು, ನೀರಲಕಟ್ಟಿಯ ಬ್ರಹ್ಮಚಾರಿಣಿ ಜಯಶ್ರೀ ಅವರು ಸಮಾಜದ ಜಾಗೃತಿಯಲ್ಲಿ ತೊಡಗಿದ್ದಾರೆ. ಕಳೆದ ದಶಕದಲ್ಲಿ ಧಾರವಾಡ ನಗರದ ಲೈನ್‌ಬಜಾರದಲ್ಲಿ ನಿರ್ಮಾಣವಾಗಿರುವ ಶ್ವೇತಾಂಬರ ಸಮುದಾಯದ ಶೀತಲನಾಥ ಜಿನಾಲಯವು ವಿಶಿಷ್ಟವಾದ ವಾಸ್ತು ರಚನೆಯಿಂದ ಮನಮೋಹಕವಾಗಿದೆ. ಇದೇ ರೀತಿ ಈ ನಗರದ ರವಿವಾರ ಪೇಟೆಯಲ್ಲಿರುವ ಪಾರ್ಶ್ವನಾಥ, ಸನ್ಮತಿ ಮಾರ್ಗದಲ್ಲಿರುವ ಮಹಾವೀರ, ಗರಗದ ಶಾಂತಿನಾಥ, ಉಪ್ಪಿನಬೇಟಗೇರಿಯ ಪಾರ್ಶ್ವನಾಥ, ಕೊಟಬಾಗಿಯ ಪಾರ್ಶ್ವನಾಥ, ಲೋಕೂರದ ಆದಿನಾಥ, ತಡಕೋಡದ ಪಾರ್ಶ್ವನಾಥ, ಹೊನ್ನಾಪುರದ ಸುಪಾರ್ಶ್ವನಾಥ, ನೀರಲಕಟ್ಟಿಯ ಪಾರ್ಶ್ವನಾಥ, ಮುಮ್ಮಿಗಟ್ಟಿಯ ಮಹಾವೀರ, ಸತ್ತೂರದ ಮಹಾವೀರ, ನವಲೂರದ ಆದಿನಾಥ, ಗೋವನಕೊಪ್ಪದ ಆದಿನಾಥ, ಕಲ್ಲಾಪುರದ ಅಭಿನಂದನನಾಥ ಜಿನಾಲಯಗಳು ಇತ್ತೀಚಿನ ನಿರ್ಮಾಣಗಳಾಗಿವೆ. ಒಟ್ಟಾರೆ, ಕನ್ನಡನಾಡಿನ ಸಾಂಸ್ಕೃತಿಕ ಕ್ಷೇತ್ರಕ್ಕೆ ಈ ತಾಲ್ಲೂಕಿನ ಜೈನ ನೆಲೆಗಳ ಕೊಡುಗೆ ಅಪಾರವೆಂದು ಹೇಳಿದರೆ ಅತಿಶಯೋಕ್ತಿಯಾಗಲಾರದು.

### ೧.೩. ಅಡಿಟಿಪ್ಪಣಿಗಳು

೧) ೨೦೦೫ರ ಅಕ್ಟೋಬರ್ ೨೨ ಮತ್ತು ೨೩ರಂದು ಶ್ರವಣಬೆಳಗೊಳದಲ್ಲಿ ಜರುಗಿದ ಅಖಿಲ ಕರ್ನಾಟಕ ಜೈನ ಸಾಹಿತ್ಯ ಸಮ್ಮೇಳನದಲ್ಲಿ ಡಾ॥ ಹಂಪನಾ ಅವರು ತಮ್ಮ ಅಧ್ಯಕ್ಷೀಯ ಭಾಷಣದಲ್ಲಿ ಈ ವಿಚಾರವನ್ನು ಪ್ರಸ್ತಾಪಿಸಿದ್ದಾರೆ. (ಈ ಕುರಿತು ಸಂಶೋಧನ ಅಧ್ಯಯನ ನಡೆಯಬೇಕಾಗಿದೆ)

೨) ನಾಯಕ ಹಾ.ಮಾ. (ಸಂ.), ಕನ್ನಡ ಸಾಹಿತ್ಯ ಚರಿತ್ರೆ ಸಂ. ೨ (೧೯೭೫), ಪು. ೩೪೮.

೩) ವಸಂತರಾಜ ಎಂ.ಡಿ., ಸನ್ಮತಿ ಶ್ರೀವಿಹಾರ (೧೯೭೧), ಪು. ೧೮೨.

೪) ಅಣ್ಣಿಗೇರಿ ಎಂ.ಎಂ. (ಸಂ.) ಶಾಸನ ಸಾಹಿತ್ಯ ಸಂಚಯ (೧೯೬೧), ಶಾ.ಸಂ. ೧೦೬, ಪು. ೧೬೧.

೫) ಇದು ಈ ಜಿನಾಲಯದಲ್ಲಿರುವ ಚಂದ್ರಪ್ರಭನಾಥ ತೀರ್ಥಂಕರ ಶಿಲ್ಪ ಮತ್ತು ಪಾದಪೀಠ ಶಾಸನದಿಂದ ಸ್ಪಷ್ಟವಾಗುತ್ತದೆ.

೬) ಈ ಗ್ರಾಮದ ವಿಜಯಣ್ಣ ಕವಿ/ಮುನಿ ತನ್ನ 'ದ್ವಾದಶಾನುಪ್ರೇಕ್ಷೆ' ಎಂಬ ಕಾವ್ಯವನ್ನು ಸ್ಥಳೀಯ ಶಾಂತಿನಾಥನ ಜಿನಾಲಯದಲ್ಲಿ ಕ್ರಿ.ಶ. ೧೬೪೮ರಲ್ಲಿ ಪೂರ್ಣಗೊಳಿಸಿದ್ದೇನೆಂದು ಹೇಳಿಕೊಂಡಿದ್ದಾನೆ.

೭) ಕಲಬುರ್ಗಿ ಎಂ.ಎಂ. (ಸಂ.), ಧಾರವಾಡ ತಾಲ್ಲೂಕಿನ ಶಾಸನಗಳು (೧೯೭೬), ಶಾ.ಸಂ. ೧೦, ಪು. ೧೯.

೮) ಅದೇ, ಶಾ.ಸಂ. ೬, ಪು. ೧೫.

೯) ಶೇಷಗಿರಿ ಕೆ.ಆರ್. (ಸಂ.) ವಿಜಯಣ್ಣ ವಿರಚಿತ ದ್ವಾದಶಾನುಪ್ರೇಕ್ಷೆ (೧೯೭೫), ಪ್ರಸ್ತಾವನೆ.

೧೦) ಕಲಬುರ್ಗಿ ಎಂ.ಎಂ. (ಸಂ.), ಪೂರ್ವೋಕ್ತ, ಶಾ.ಸಂ., ಪು.

೧೧) ಗುರವ ಆರ್.ಎನ್., ದಿ ಕದಂಬಾಸ್ ಆಫ್ ಗೋವಾ ಆ್ಯಂಡ್ ದೇಯರ್ ಇನ್‌ಸ್ಕ್ರಿಪ್‌ಶನ್ಸ್ (ಅಪ್ರಕಟಿತ ಪಿಎಚ್.ಡಿ. ಮಹಾಪ್ರಬಂಧ ೧೯೬೯), ಶಾ.ಸಂ. ೪೩, ಪು. ೬೩೭.

೧೨) ಕಲಬುರ್ಗಿ ಎಂ.ಎಂ. (ಸಂ.), ಪೂರ್ವೋಕ್ತ, ಶಾ.ಸಂ. ೧೧, ಪು. ೨೦–೨೧.

೧೩) ಪಾಟೀಲ ಎಸ್.ಪಿ. ಮತ್ತು ಶೇಷಗಿರಿ ಕೆ.ಆರ್. (ಸಂ.), ಚಿಕ್ಕಮಲ್ಲಣಕವಿಯ ಸಮ್ಯಕ್ತ್ವಕೌಮುದಿ (೨೦೦೧), ಪ್ರಸ್ತಾವನೆ.

೧೪) ಇದು ಇಲ್ಲಿ ದೊರೆತ ಸಮಕಾಲೀನ ವಾಸ್ತುಶಿಲ್ಪಾವಶೇಷಗಳಿಂದ ದೃಢಪಡುತ್ತದೆ.

೧೫) ಹಂಜೆ ಅಪ್ಪಣ್ಣ ಎನ್., ಧಾರವಾಡ ಪರಿಸರದಲ್ಲಿ ಜೈನಧರ್ಮ (ಅಪ್ರಕಟಿತ ಕೃತಿ.)

೧೬) ಅದೇ.

೧೭) ಕಲಬುರ್ಗಿ ಎಂ.ಎಂ. (ಸಂ.) ಪೂರ್ವೋಕ್ತ, ಶಾ.ಸಂ. ೨೦, ಪು. ೩೭–೩೮.

೧೮) ಅದೇ ಶಾ.ಸಂ. ೨೧, ಪು. ೩೮–೩೯.

೧೯) ಅದೇ, ಶಾ.ಸಂ. ೨೨, ಪು. ೩೯,

೨೦) ಪಾಡಿಗಾರ ಶ್ರೀನಿವಾಸ ಮತ್ತು ಹಂಜೆ ಅಪ್ಪಣ್ಣ ಎನ್., "ತಡಕೋಡದ ಮೂರು ಜೈನ ಪಾದಪೀಠ ಶಾಸನಗಳು" (ಇದು ಹಂಪಿ ವಿಶ್ವವಿದ್ಯಾಲಯದ 'ಶಾಸನ ಅಧ್ಯಯನ' ಪತ್ರಿಕೆಯಲ್ಲಿ ಪ್ರಕಟವಾಗುತ್ತಿದೆ).

೨೧) ಅದೇ.

೨೨) ಅದೇ.

೨೩) ಪಾಡಿಗಾರ ಶ್ರೀನಿವಾಸ ಮತ್ತು ಹಂಜೆ ಅಪ್ಪಣ್ಣ ಎನ್., "ಧಾರವಾಡ ನಗರದ ಹೊಸಯಲ್ಲಾಪುರದಲ್ಲಿರುವ ಒಂದು ಜೈನಶಾಸನ", ಶಾಸನ ಅಧ್ಯಯನ, ಸಂ. ೨, ಸಂ. ೧ (೨೦೦೫), ಪು. ೮–೧೦.

೨೪) ಕಲಬುರ್ಗಿ ಎಂ.ಎಂ. (ಸಂ.) ಪೂರ್ವೋಕ್ತ, ಶಾ.ಸಂ. ೩೯, ಪು. ೬೬–೭೧.

೨೫) ಷಡಕ್ಷರಯ್ಯ ಆರ್.ಎಂ., "ಧಾರವಾಡ ಜಿಲ್ಲೆಯಲ್ಲಿ ಕಂಡುಬಂದ ಹೆಚ್ಚಿನ ದೇವಾಲಯ, ಶಿಲ್ಪ, ಶಾಸನಗಳು", ಇತಿಹಾಸ ದರ್ಶನ ಸಂ. ೧೩ (೧೯೯೮), ಪು. ೭೩–೭೪.

೨೬) ಕಲಬುರ್ಗಿ ಎಂ.ಎಂ. (ಸಂ.), ಪೂರ್ವೋಕ್ತ, ಶಾ.ಸಂ. ೪೨, ಪು. ೭೮–೭೯.

೨೭) ಅದೇ, ಶಾ.ಸಂ. ೪೫, ಪು. ೮೩.

೨೮) ಪಾಡಿಗಾರ ಶ್ರೀನಿವಾಸ ಮತ್ತು ಹಂಜೆ ಅಪ್ಪಣ್ಣ ಎನ್., "ಮನಗುಂಡಿಯಲ್ಲಿ ದೊರೆತ ಗೋವೆ ಕಾದಂಬ ಮನೆತನದ ಮುಮ್ಮಡಿ ಗೂವಲದೇವನ ಶಾಸನ" (ಇದು ಹಂಪಿ ವಿಶ್ವವಿದ್ಯಾಲಯದ 'ಶಾಸನ ಅಧ್ಯಯನ' ಪತ್ರಿಕೆಯಲ್ಲಿ ಪ್ರಕಟವಾಗುತ್ತಿದೆ).

೨೯) ಕಲಬುರ್ಗಿ ಎಂ.ಎಂ. (ಸಂ.) ಪೂರ್ವೋಕ್ತ, ಶಾ.ಸಂ. ೫೩, ಪು. ೧೦೭–೧೧೧.

೩೦) ಅದೇ, ಶಾ.ಸಂ. ೫೬, ಪು. ೧೧೬–೧೨೦.

೩೧) ಅದೇ, ಶಾ.ಸಂ. ೬೧, ಪು. ೧೩೨.

೩೨) ಅದೇ, ಶಾ.ಸಂ. ೭೩, ಪು. ೧೬೨.



# ಕನಕಪುರ ತಾಲ್ಲೂಕಿನ ಅಲಸೂರು ಮತ್ತು ಕಾಡಹಳ್ಳಿಯ ಪ್ರಾಚೀನ ವೀರಗಲ್ಲುಗಳು ಹಾಗೂ ಮೂರ್ತಿಗಳು – ಒಂದು ನವ ಶೋಧನೆ

• *ಮುತ್ತುರಾಜು*

ಕನಕಪುರ ತಾಲ್ಲೂಕು ಸಾತನೂರು ಹೋಬಳಿಯಲ್ಲಿ ಬರುವ ಎರಡು ಪ್ರಾಚೀನ ಗ್ರಾಮಗಳು ಅಲಸೂರು ಮತ್ತು ಕಾಡಹಳ್ಳಿ ಗ್ರಾಮಗಳು. ಎರಡೂ ಅವಳಿ ಗ್ರಾಮಗಳಾಗಿದ್ದು ಕೇವಲ ಒಂದುವರೆ ಕಿಲೋಮೀಟರ್ ಹಂತದ ದೂರದಲ್ಲಿವೆ. ಹಲಸು ಮರಗಳು ಹೆಚ್ಚಾಗಿ ಬೆಳೆಯುತ್ತಿದ್ದ ಸ್ಥಳದಲ್ಲಿ ಊರು ನಿರ್ಮಾಣವಾಗಿದೆ. ಕಾಡಿನ ಅಂಚಿನಲ್ಲಿ ಹಳ್ಳಿ ನಿರ್ಮಾಣವಾಗಿರುವುದರಿಂದ ಕಾಡಿನಹಳ್ಳಿ ಕಾಡುಹಳ್ಳಿ ನಂತರ ಕಾಡಳ್ಳಿಯಾಗಿ ಬಳಕೆಗೆ ಬಂದಿದೆ.

ಅಲಸೂರು ಹೋಬಳಿಕೇಂದ್ರವಾದ ಸಾತನೂರಿನಿಂದ ನಾಲ್ಕು ಕಿ.ಮೀ. ಅಂತರದಲ್ಲಿದೆ. ಇಲ್ಲಿ ಎಂಟು ಪ್ರಾಚೀನ ವೀರಗಲ್ಲುಗಳ



ಜೊತೆಗೆ ಸೂರ್ಯನ ಪ್ರತಿಮೆ ಮತ್ತು ದುರ್ಗೆಯ ಪ್ರತಿಮೆಗಳೂ ಕಂಡುಬಂದಿವೆ. ಇವುಗಳಲ್ಲಿ ಆರು ವೀರಗಲ್ಲುಗಳು ಈ ಗ್ರಾಮದ ಮಹಾದೇವಮ್ಮ ದೇವಾಲಯದ ಬಲ ಮತ್ತು ಎಡ ಭಾಗಗಳಲ್ಲಿ ನಿಲ್ಲಿಸಿದವುಗಳಾಗಿವೆ. ಒಂದೂವರೆ ಅಡಿ ಎತ್ತರ ಮತ್ತು ಮುಕ್ಕಾಲು ಅಡಿ ಅಗಲವಾದ ಗ್ರಾನೈಟ್ ಶಿಲೆಯ ವೀರಗಲ್ಲಿನಲ್ಲಿ ವೀರ ಮತ್ತು ಆತನ ಸತಿ ಇರುವ ಚಿತ್ರಣವಿದೆ. ವೀರನು ತನ್ನ ಖಡ್ಗವನ್ನು ಕೈಯಿಂದ ಮೇಲೆ ಎತ್ತಿ ಹಿಡಿದಿದ್ದಾನೆ. ಯುದ್ಧದಲ್ಲಿ ಶತ್ರುಗಳ ಜೊತೆ ಹೋರಾಡಿ ಮಡಿದ ಈ ವೀರನನ್ನು ಸತಿ ಪದ್ಧತಿ ಅನುಸರಿಸುವುದರ ಮೂಲಕ ಪತ್ನಿಯೂ ಸಹ ಮಡಿದ ತನ್ನ ಪತಿಯ ಜೊತೆ ಸ್ವರ್ಗವನ್ನು ಸೇರಿದ್ದಾಳೆ. ಈಕೆಯು ಪತಿಯ ಚಿತ್ರದ ಪಕ್ಕ ತನ್ನ ನಡುವಿನ ಬಳಿ ಎಡದಕೈ ಅನ್ನು ಮಡಚಿಕೊಂಡು ನಿಂತಿದ್ದಾಳೆ. ಇವರಿಬ್ಬರ ಚಿತ್ರದ ಕೆಳಭಾಗದಲ್ಲಿ ಸತಿಯು ಅಗ್ನಿಪ್ರವೇಶ ಮಾಡಿರುವ ಚಿತ್ರಣವಿದೆ.

ಒಂದೂವರೆ ಅಡಿ ಅಗಲ ಮತ್ತು ಒಂದು ಅಡಿ ಎತ್ತರವಿರುವ ಎರಡನೆಯ ವೀರಗಲ್ಲಿನಲ್ಲಿ ವೀರ ಮತ್ತು ಸತಿಯರ ಚಿತ್ರಗಳೇ ಇದ್ದು ಸತಿಯು ಕೈ ಮುಗಿದು ನಿಂತುಕೊಂಡಿದ್ದಾರೆ. ವೀರ ತನ್ನ ಖಡ್ಗವನ್ನು ಮೇಲಕ್ಕೆ ಎತ್ತಿ ಹಿಡಿದಿದ್ದಾನೆ. ಈ ಚಿತ್ರಣದಿಂದ ವೀರನು ಶತ್ರುಗಳೊಡನೆ ಯಾವುದೋ ಒಂದು ಕಾರಣಕ್ಕಾಗಿ ಹೋರಾಟ ಮಾಡಿ ಮಡಿದಿದ್ದಾನೆ. ಮಡಿದ ಈ ವೀರನ ಪತ್ನಿ ಅಂದಿನ ಪದ್ಧತಿಯಂತೆ ಸಹಗಮನ ಪದ್ಧತಿ ಅನುಸರಿಸುವ ಚಿತೆಯನ್ನು ಏರಿ ಪತಿಯನ್ನು ಸಾವಿನಲ್ಲಿಯೂ ಹಿಂಬಾಲಿಸಿದ್ದಾಳೆ.

ಮುಕ್ಕಾಲು ಅಡಿ ಎತ್ತರ ಮತ್ತು ಅಷ್ಟೇ ಅಗಲವಿರುವ ಗ್ರಾನೈಟ್ ಕಲ್ಲಿನ ವೀರಗಲ್ಲು ಮೂರನೆಯದಾಗಿದ್ದು ಇಲ್ಲಿಯೂ ಸಹ ಸತಿಯನ್ನು ನಿಂತಭಂಗಿಯಲ್ಲಿ ಚಿತ್ರಣ ಮಾಡಲಾಗಿದೆ. ಬಳಿಯಲ್ಲಿ ವೀರನ ಚಿತ್ರ ಈಗ ನಾಶವಾಗಿದೆ. ಇದೂ ಸಹ ವೀರನು ಶತ್ರುಗಳ ಜೊತೆ ಹೋರಾಡಿ ಮಡಿದ ವೀರನ ಸಂಗತಿಯನ್ನು ತಿಳಿಸುವುದಾಗಿದ್ದು ಪತ್ನಿಯು ಸಹಗಮನ ಪದ್ಧತಿ ಅನುಸರಿಸಿದ್ದಾಳೆ.

ನಾಲ್ಕನೆಯ ಗ್ರಾನೈಟ್‌ಕಲ್ಲಿನ ಶಿಲ್ಪದಲ್ಲಿ ಸತಿಯು ಇಳಿಬಿಟ್ಟ ಕೈಗಳಿಂದ ತಾಡಾಸನದಲ್ಲಿ ನಿಂತುಕೊಂಡಿದ್ದಾಳೆ. ವೀರನು ಖಡ್ಗವನ್ನು ಎತ್ತಿ ಹಿಡಿದು ಯುದ್ಧದಲ್ಲಿ ಹೋರಾಡಿರುವುದನ್ನು ಸೂಚಿಸುತ್ತಿದ್ದಾನೆ. ಇಲ್ಲಿಯೂ ಸಹ ವೀರ ರಾಜಕೀಯವಾದ ಯಾವುದೋ ಕಾರಣಕ್ಕಾಗಿ ಹೋರಾಡಿ ಶತ್ರುಗಳಿಂದ ಹತನಾಗಿದ್ದಾನೆ. ಪತ್ನಿ ಚಿತೆ ಏರಿ ಸಹಗಮನ ಪದ್ಧತಿ ಅನುಸರಿಸಿದ್ದಾಳೆ.

ಎರಡೂವರೆ ಅಡಿ ಎತ್ತರ ಮತ್ತು ೨ ಅಡಿ ಅಗಲವನ್ನು ಉಳ್ಳಂತಹ ಕೆಂಪು ಗ್ರಾನೈಟ್ ಕಲ್ಲಿನ ವೀರಗಲ್ಲಿನಿಂದ ಪತಿ ಪತ್ನಿಯರು ಆಭರಣಭೂಷಿತರಾಗಿರುವ ಅತ್ಯಂತ ಪ್ರಮುಖ ವ್ಯಕ್ತಿಗಳೆಂದು ತಿಳಿದುಬರುತ್ತದೆ. ಸತಿಯು ವಿಭಿನ್ನವಾದ ನೃತ್ಯಭಂಗಿಯಲ್ಲಿ ನಿಂತಿದ್ದಾಳೆ. ಪತಿ ತನ್ನ ಖಡ್ಗವನ್ನು ಎತ್ತಿ ಹಿಡಿದಿದ್ದಾನೆ. ಈತನೂ ಸಹ ಯುದ್ಧದಲ್ಲಿ ಶತ್ರುಗಳೊಡನೆ ಹೋರಾಡಿ ರಾಜಕೀಯ ಕಾರಣಕ್ಕಾಗಿಯೇ ಹೋರಾಡಿ ಹತನಾಗಿದ್ದಾನೆ. ಪತ್ನಿ ಚಿತೆ ಏರಿ ಸಹಗಮನ ಮಾಡಿದ್ದಾಳೆ.

ಇದೇ ಮಹಾದೇವಮ್ಮ ದೇವಾಲಯದ ಎಡಭಾಗದಲ್ಲಿ ಇರುವ ಎರಡು ಅಡಿ ಎತ್ತರ ಮತ್ತು ಅಷ್ಟೇ ಅಗಲದ ಕೆಂಪು ಗ್ರಾನೈಟ್‌ನ ವೀರಗಲ್ಲಿನಲ್ಲಿ ವೀರನು ವೀರಾವೇಶದಿಂದ



ಹೋರಾಡುತ್ತಿದ್ದಾನೆ. ಈತನ ಕೈಗಳಲ್ಲಿ ಖಡ್ಗ ಮತ್ತು ಗುರಾಣಿಗಳಿವೆ. ಸತಿ ಕೈ ಮುಗಿದು ಈ ವೀರನ ಬಲಭಾಗದಲ್ಲಿ ನಿಂತಿದ್ದಾಳೆ. ಈ ಘಟನೆಯಲ್ಲಿಯೂ ವೀರ ಶತ್ರುಗಳ ಜೊತೆ ಹೋರಾಡಿ ಹತನಾಗಿದ್ದಾನೆ. ಸತಿ ಸಹಗಮನ ಮಾಡಿದ್ದಾಳೆ.

ಮೇಲಿನ ಎಲ್ಲಾ ವೀರಗಲ್ಲುಗಳನ್ನು ಗಮನಿಸಿದಾಗ ಮಡಿದ ಎಲ್ಲಾ ವೀರರ ಸತಿಯರು ಇಲ್ಲಿ ಸಹಗಮನ ಮಾಡಿದ್ದಾರೆ. ಇದರಿಂದ ಅಲಸೂರು ಯುದ್ಧಭೂಮಿಯಂತೆ ಸತಿಸಹಗಮನದ ಪವಿತ್ರ ಭೂಮಿಯೂ ಆಗಿತ್ತು ಎಂದು ತಿಳಿಯಬಹುದಾಗಿದೆ.

ಇದೇ ಮಹಾದೇವಮ್ಮನ ದೇವಾಲಯದ ಮುಂದೆ ಇರುವ ಖಾಲಿ ಹೊಲದಲ್ಲಿ ಐದು ಅಡಿ ಎತ್ತರ ಮತ್ತು ನಾಲ್ಕು ಅಡಿ ಅಗಲದ ಕೆಂಪು ಗ್ರಾನೈಟ್‌ಕಲ್ಲಿನ ವೀರಗಲ್ಲು ಒಂದು ಇದ್ದು ಮೂರು ಹಂತಗಳನ್ನು ಒಳಗೊಂಡಿರುವ ತುರುಗಾಳಗ ವರ್ಗಕ್ಕೆ ಸೇರುವ ವೀರಗಲ್ಲು ಆಗಿದೆ. ಇದರಲ್ಲಿ ಗೋವು ಅನ್ನು ಕಲ್ಲಿನ ಬಲಭಾಗದಲ್ಲಿ ಚಿತ್ರಿಸಲಾಗಿದೆ. ಇದು ಎಡಮುಖವಾಗಿ ನಿಂತುಕೊಂಡಿದೆ. ಅಂದರೆ ಈ ಗೋವನ್ನು ರಕ್ಷಿಸುವಲ್ಲಿ ವೀರರು ವಿಫಲರಾಗಿದ್ದಾರೆ. ಆಕ್ರಮಿತ ಶತ್ರುಗಳು ಖಡ್ಗವಿಡಿದು ಗೋವನ್ನು ರಕ್ಷಿಸಲು ಬಂದ ವೀರರನ್ನು ಇರಿಯುತ್ತಿದ್ದಾರೆ. ಯುದ್ಧನಿರತ ವಾಗಿರುವ ವೀರನ ಯುದ್ಧ ಚಿತ್ರಣ ಭೀಭತ್ಸವಾಗಿ ಮೂಡಿ ಬಂದಿದ್ದು ಮಡಿಯುತ್ತಿರುವ ವೀರನು ತನ್ನ ಎದೆ ಉದರಗಳನ್ನು ಮುಂದೆ ತೋರಿಸಿ ಬೆನ್ನಿನ ಭಾಗಕ್ಕೆ ಬಾಗಿದ್ದಾನೆ. ಇಂತಹ ಯುದ್ಧ ಚಿತ್ರಣ ಈವರೆಗೆ ದೊರೆತ ವೀರಗಲ್ಲುಗಳಲ್ಲೇ ಅತಿ ವಿರಳವಾದ ಚಿತ್ರಣವಾಗಿದೆ. ಈ ವೀರಗಲ್ಲಿನ ಎರಡನೇ ಹಂತದಲ್ಲಿ ಗೋವುಗಳನ್ನು ರಕ್ಷಿಸಲು ವಿಫಲರಾಗಿ ಮಡಿದ ಈ ಈರ್ವರು ವೀರರನ್ನು ಅಪ್ಸರೆಯರು ಸ್ವರ್ಗಕ್ಕೆ ಚಾಮರ ಬೀಸುತ್ತಾ ಕರೆದುಕೊಂಡು ಹೋಗುತ್ತಿದ್ದಾರೆ. ಮೂರನೆಯ ಹಂತದಲ್ಲಿ ಮಡಿದ ವೀರರು ಕೈಲಾಸದಲ್ಲಿ ಚಾಮರಧಾರಿಣಿಯರಾದ ಅಪ್ಸರೆಯರ ಜೊತೆ ಪದ್ಮಾಸನದ ವೀರಭಂಗಿಯಲ್ಲಿ ಕುಳಿತಿದ್ದಾರೆ. ಬಳಿಯಲ್ಲಿ ನಂದಿ ಮತ್ತು ಶಿವಲಿಂಗ ಹಾಗೂ ಮಂಟಪಗಳು ಇವೆ.

ಇಲ್ಲಿಯ ಹನುಮಂತರಾಯನ ಕೆರೆಯ ಬಲಭಾಗದಲ್ಲಿ ಪೂರ್ವದಿಕ್ಕಿಗೆ ಇರುವ ನಾಲ್ಕು ಅಡಿ ಎತ್ತರ ಮತ್ತು ಅಷ್ಟೇ ಅಗಲದ ಕೆಂಪು ಗ್ರಾನೈಟ್‌ಕಲ್ಲಿನ ವೀರಗಲ್ಲೂ ಸಹ ಮೂರು ಹಂತಗಳಿಂದ ಕೂಡಿದೆ. ಮೊದಲ ಹಂತದಲ್ಲಿ ಮೂರು ಜನ ವೀರರು ತಮ್ಮ ಬಲದ ಕೈಗಳಲ್ಲಿ ಖಡ್ಗವನ್ನು ಶಿರದ ಮೇಲೆ ಎತ್ತಿ ಹಿಡಿದಿದ್ದಾರೆ. ಬಳಿಯಲ್ಲಿ ಸತಿ ಸಹಗಮನ ಪದ್ಧತಿ ಅನುಸರಿಸಿರುವ ಓರ್ವ ಮಹಿಳೆ ನಿಂತುಕೊಂಡಿದ್ದಾಳೆ. ಎರಡನೆ ಹಂತದಲ್ಲಿ ಮಡಿದ ಈ ಮೂರು ಜನ ವೀರರು ಕೈ ಕೈ ಹಿಡಿದುಕೊಂಡು ಇಬ್ಬರು ಚಾಮರಧಾರಿಣಿಯರೊಡನೆ ನಿಂತಿದ್ದಾರೆ. ಅಂದರೆ ಈ ಮೂರುಜನ ವೀರರು ರಾಜಕೀಯ ಕಾರಣಕ್ಕಾಗಿ ಶತ್ರುಗಳ ಜೊತೆ ಹೋರಾಡಿ ಮಡಿದಿದ್ದಾರೆ. ಇವರಲ್ಲಿನ ಓರ್ವನ ಸತಿ ಚಿತೆ ಏರಿ ಸಹಗಮನ ಪದ್ಧತಿ ಅನುಸರಿಸಿದ್ದಾಳೆ.

ಮೂರನೆಯ ಹಂತದಲ್ಲಿ ಮೂವರು ವೀರರು ಸ್ವರ್ಗದಲ್ಲಿ ವೀರಮಂಡಿ ಹಾಕಿ ನಮಿಸುತ್ತಾ ಕುಳಿತ್ತಿದ್ದಾರೆ. ಸಾಮಾನ್ಯವಾಗಿ ಪದ್ಮಾಸನ ಹಾಕಿ ಕೈಮುಗಿದು ಕುಳಿತಿರುವ ಚಿತ್ರಣವೇ ಇರುತ್ತದೆ. ಹೀಗೆ ವೀರಮಂಡಿಯಿಂದ ಕುಳಿತಿರುವ ಚಿತ್ರಣ ವಿಭಿನ್ನವಾದುದಾಗಿದೆ. ಬಳಿಯಲ್ಲಿ ನಂದಿಯನ್ನು ಪೂಜಿಸುವ ಯತಿ, ಶಿವಲಿಂಗ ಮತ್ತು ಮಂಟಪಗಳಿವೆ.

ಮೇಲಿನ ಈ ಎಲ್ಲಾ ವೀರಗಲ್ಲುಗಳು ಪ್ರಾಚೀನತೆಯ ದೃಷ್ಟಿಯಿಂದ ಕ್ರಿ.ಶ. ಸುಮಾರು ಹನ್ನೆರಡನೆಯ ಶತಮಾನದಿಂದ ಹದಿನೈದನೆಯ ಶತಮಾನಕ್ಕೆ ಸೇರಿದವುಗಳಾಗಿವೆ. ಇವುಗಳ ಜೊತೆಗೆ ಲಿಂಗದಗುಡಿಯ ಮುಂದೆ ನಾಗರಕಟ್ಟೆಯ ಬಳಿ ಒಂದೂವರೆ ಅಡಿ ಎತ್ತರದ ಸೂರ್ಯಮೂರ್ತಿ ಇದೆ. ಅಲ್ಲದೇ ಮಹಾದೇವಮ್ಮ ದೇವಾಲಯದ ಬಲಭಾಗದಲ್ಲಿನ ಅರಳಿಮರ ಮತ್ತು ಬೇವಿನ ಮರದ ಕಟ್ಟೆಯ ಬಳಿ ಕೆಂಪುಗ್ರಾನೈಟ್‌ನಿಂದ ಮಾಡಿರುವ ದುರ್ಗೆಯ ಮೂರ್ತಿಯೂ ಒಂದಿದೆ. ಇದು ನಿಂತ ಭಂಗಿಯಲ್ಲಿದೆ. ಸಾಮಾನ್ಯವಾಗಿ ಕರ್ನಾಟಕದಲ್ಲಿ ಕುಳಿತ ದುರ್ಗೆಮೂರ್ತಿಗಳು ಲಭಿಸಿರುವುದೇ ಹೆಚ್ಚು. ಆದರೆ ನಿಂತಭಂಗಿಯಲ್ಲಿ ಇಲ್ಲಿ ಚಿತ್ರಿತ ವಾಗಿರುವುದು ವಿಶೇಷ. ಈಕೆ ಚತುರ್ಭುಜ ಧಾರಿಣಿಯಾಗಿದ್ದು ಖಡ್ಗ ಮತ್ತು ಡಮರು ಹಾಗೂ ಪಾನಪಾತ್ರೆ ಮತ್ತು ತ್ರಿಶೂಲಗಳನ್ನು ಹಿಡಿದಿದ್ದಾಳೆ. ಶಿಲ್ಪಚಿತ್ರಣದ ಅಡಿಯಲ್ಲಿ ನಾಗರಹಾವು ಇರುವ ಚಿತ್ರವಿದೆ. ಇದೂ ಸಹ ಅತಿ ವಿರಳವಾದ ಸಂಕೇತವಾಗಿದೆ. ಜೊತೆಗೆ ಮತ್ತೆರಡು ಅಸ್ಪಷ್ಟ ಚಿತ್ರಗಳು ಎಡಬಲಗಳಲ್ಲಿವೆ. ಪ್ರಾಚೀನತೆಯ ದೃಷ್ಟಿಯಿಂದ ಮೇಲಿನ ಎರಡೂ ಮೂರ್ತಿಗಳು ಕ್ರಿ.ಶ. ಸುಮಾರು ಹದಿಮೂರನೆಯ ಶತಮಾನಕ್ಕೆ ಸೇರಿದವುಗಳಾಗಿವೆ. ಇದರಿಂದ ಅಲಸೂರು ಕ್ರಿ.ಶ. ಸುಮಾರು ಹತ್ತನೆಯ ಶತಮಾನದಿಂದಲೇ ಅತ್ಯಂತ ಸಾಂಸ್ಕೃತಿಕ ಗ್ರಾಮವಾಗಿ ರೂಪುಗೊಂಡಿದ್ದಿತೆಂದು ಸ್ಪಷ್ಟವಾಗುತ್ತದೆ.

ಕಾಡುಹಳ್ಳಿಯ ಮುಖ್ಯರಸ್ತೆಯಲ್ಲಿ ಪುಟ್ಟಗುಡಿಯ ಹಾಗೆ ನಿರ್ಮಿಸಿದ್ದ ವೀರಗಲ್ಲುಗಳಲ್ಲಿ ಒಂದನ್ನು ಈಗಿನ ದಂಡಿನ ಮಾರಮ್ಮ ದೇವಾಲಯದ ಎದುರುಗಡೆ ತಂದು ನಿಲ್ಲಿಸಲಾಗಿದೆ. ಐದೂವರೆ ಅಡಿ ಎತ್ತರ ಮತ್ತು ಅಷ್ಟೆ ಅಗಲದ ಗ್ರಾನೈಟ್ ಕಲ್ಲಿನ ಪ್ರಾಚೀನ ವೀರಗಲ್ಲುಗಳಲ್ಲಿ ಒಂದು ಇದಾಗಿದ್ದು ಮೂರು ಹಂತಗಳನ್ನು ಹೊಂದಿದೆ. ಮೊದಲನೆಯ ಹಂತದಲ್ಲಿ ನಾಲ್ವರು ವೀರರು ಅಶ್ವದೊಡನೆ ಹೋರಾಡುತ್ತಿದ್ದಾರೆ. ಅಶ್ವ ಬಲಭಾಗದಲ್ಲಿದ್ದು ಎಡಭಾಗದ ಕಡೆಗೆ ನೋಡುತ್ತಿದೆ. ಖಡ್ಗ ಗುರಾಣಿ ಹಿಡಿದ ಇಬ್ಬರು ವೀರರು ಬಿಲ್ಲು ಬಾಣ ಹಿಡಿದ ಇಬ್ಬರು

ಎದುರಾಳಿಗಳಾದ ಶತ್ರುಗಳ ಜೊತೆ ಹೋರಾಟ ಮಾಡುತ್ತಿದ್ದಾರೆ. ಈ ವೀರನ ಹಿಂದುಗಡೆ ಖಡ್ಗ ಮತ್ತು ಗುರಾಣಿ ಹಿಡಿದ ವೀರನೊಬ್ಬ ನಿಂತಿದ್ದಾನೆ.

ಈ ವೀರಗಲ್ಲಿನ ಎರಡನೆಯ ಹಂತದಲ್ಲಿ ಯುದ್ಧದಲ್ಲಿ ಮಡಿದ ವೀರರಿಬ್ಬರು ತಮ್ಮ ಸತಿಯರ ಜೊತೆ ಕೂಡಿ ಪಲ್ಲಕ್ಕಿಯಲ್ಲಿ ಕುಳಿತುಕೊಂಡು ಚಾಮರಧಾರಿಣಿಯರ ಜೊತೆ ಸ್ವರ್ಗಕ್ಕೆ ಹೋಗುತ್ತಿದ್ದಾರೆ.

ಮೂರನೆಯ ಹಂತದಲ್ಲಿ ಮಡಿದ ವೀರರು ತಮ್ಮ ಸತಿಯರ ಜೊತೆಗೆ ಪದ್ಮಾಸನದಲ್ಲಿ ಕುಳಿತು ಕೈಮುಗಿಯುತ್ತಾ ಕೈಲಾಸದಲ್ಲಿ ಕುಳಿತುಕೊಂಡಿದ್ದಾರೆ. ಯತಿಯೊಬ್ಬನು ನಂದಿಯನ್ನು ಪೂಜಿಸುವ ಚಿತ್ರ ಮತ್ತು ಶಿವಲಿಂಗ, ನಂದಿಯ ಬಳಿ ಮಂಟಪದ ಚಿತ್ರವಿದೆ. ಕಲ್ಲಿನ ಮೇಲಿನ ಭಾಗದಲ್ಲಿ ಸೂರ್ಯ ಚಂದ್ರರ ರೇಖಾಚಿತ್ರಗಳಿವೆ.

ಈ ಹಳ್ಳಿಯ ಸರಹದ್ದಿನಲ್ಲಿರುವ ನಾಗರಸನ ಕೋಟೆ, ಹರಿಹರ ಅಲಸೂರು ದಳವಾಯಿ ಕೋಡಿಹಳ್ಳಿ, ಹಲಗೂರು ಪ್ರದೇಶಗಳು ಯುದ್ಧ ಮತ್ತು ಮಹಾಸತಿ ಆಚರಣೆಯ ಪ್ರದೇಶಗಳಾಗಿದ್ದು ಹಾಗೆಯೇ ಕಾಡಹಳ್ಳಿಯಲ್ಲಿಯೂ ಹೊರಗಿನ ಇಬ್ಬರು ಶತ್ರುಗಳ ಆಕ್ರಮಣ ಎದುರಿಸಲು ಸ್ಥಳೀಯ ಇಬ್ಬರು ವೀರರು ಹೋರಾಡುತ್ತಾ ಮಡಿದಿದ್ದಾರೆ. ಇವರ ಮರಣದ ನಂತರ ಅಂದಿನ ಪದ್ಧತಿಯಂತೆ ಇವರ ಪತ್ನಿಯರು ಚಿತೆ ಏರಿ ಸತಿಪದ್ಧತಿ ಅನುಸರಿಸಿ ತಮ್ಮ ವೀರರಾದ ಪತಿಗಳೊಡನೆ ಕೈಲಾಸವನ್ನು ಸೇರಿದ್ದಾರೆ. ರಾಜಕೀಯ ಕಾರಣಕ್ಕಾಗಿ ನಡೆದಿರುವ ಯುದ್ಧ ಇದು ಎಂದು ಶಿಲ್ಪದ ಚಿತ್ರಣದಿಂದ ತಿಳಿಯಬಹುದು. ಬರವಣಿಗೆ ಇಲ್ಲದ ಕಾರಣ ಯಾವ ಊರಿನ ಶತ್ರುಗಳು ಕಾಡಹಳ್ಳಿಯ ವೀರರ ಮೇಲೆ ಆಕ್ರಮಣ ಮಾಡಿದರು ಎಂದು ನಿರ್ಧರಿಸುವುದು ಕಷ್ಟಕರವಾಗಿದೆ. ವೀರಗಲ್ಲುಗಳ ಲಕ್ಷಣದ ದೃಷ್ಟಿಯಿಂದ ಈ ವೀರಗಲ್ಲಿನ ಪ್ರಾಚೀನತೆಯನ್ನು ಕ್ರಿಸ್ತಶಕ ಸುಮಾರು ಹನ್ನೆರಡನೆಯ ಶತಮಾನಕ್ಕೆ ಸೇರಿದುದೆಂದು ತೀರ್ಮಾನಿಸಬಹುದು.

ಇದೇ ವೀರಗಲ್ಲಿನ ಬಲಭಾಗದಲ್ಲಿ ಒಂದು ಅಡಿ ಎತ್ತರದ ಹುಲಿ ಬೇಟೆಯಾಡುತ್ತಿದೆ. ಆಕ್ರಮಿತ ಹುಲಿಯಿಂದ ತಪ್ಪಿಸಿಕೊಳ್ಳಲು ಗೋವು ಹೆಣಗಾಡುತ್ತಿದೆ. ಕೊನೆಗೆ ಹತವೂ ಆಗಿದೆ. ಇದರ ನೆನಪಿಗಾಗಿ ಈ ಸ್ಮಾರಕವನ್ನು ನಿರ್ಮಿಸಲಾಗಿದೆ. ಇದು ಪುಟ್ಟ ಸ್ಮಾರಕಶಿಲೆಯಾಗಿದ್ದರೂ ಗಮನಾರ್ಹವಾದುದಾಗಿದೆ. ಕ್ರಿಸ್ತಶಕ ಸುಮಾರು ಹದಿನೈದನೆಯ ಶತಮಾನದಲ್ಲಿ ಘಟಿಸಿದ ಘಟನೆಯನ್ನು ಇಲ್ಲಿ ಚಿತ್ರಿಸಲಾಗಿದೆ.

ಕನಕಪುರ ತಾಲ್ಲೂಕಿನ ಇತಿಹಾಸದ ಸ್ಮಾರಕಗಳಲ್ಲಿ ಅಲಸೂರು ಮತ್ತು ಕಾಡಹಳ್ಳಿಯ ಈ ವೀರಗಲ್ಲು ಮತ್ತು ಮೂರ್ತಿಶಿಲ್ಪಗಳು ಮುಖ್ಯವಾದ ಪಾತ್ರವನ್ನು ವಹಿಸುತ್ತವೆ. ಪ್ರಾಚೀನ ಕಾಲದಿಂದ ಈ ಗ್ರಾಮಗಳು ಬೆಳೆದು ಉಳಿದು ಬಂದಿವೆ.

❑

# ಚಿಕದೇವರಾಯರ "ಗೀತಗೋಪಾಲ" ಪ್ರಬಂಧ ಕಾವ್ಯ

• ಎಂ.ಆರ್. ನರಸಿಂಹನ್

ಮೈಸೂರಿನ ಅರಸರು ಸಂಗೀತ ಸಾಹಿತ್ಯಗಳಿಗೆ ಪ್ರೋತ್ಸಾಹ ನೀಡುತ್ತಿದ್ದ ವಿಚಾರವನ್ನು ಜನಸಾಮಾನ್ಯರು ಅರಿತಿರುವರೇ ವಿನಹ ಅನೇಕ ಅರಸರು ಸ್ವಯಂ ಸಂಗೀತ ಸಾಹಿತ್ಯ ರಚನೆ ನಡೆಸುವುದರಲ್ಲಿ ಎತ್ತಿದ ಕೈ ಆಗಿದ್ದರೆಂಬ ವಿಚಾರ ಹಲವರಿಗೆ ತಿಳಿಯದು.

ಚಿಕದೇವರಾಜ ಒಡೆಯರ್ ಅವರು ಗೀತರಚನೆ ನಡೆಸಿರುವುದು ಅವರ 'ಗೀತಗೋಪಾಲಂ' ಎಂಬ ಪ್ರಬಂಧ ಕಾವ್ಯದಿಂದ ನಮಗೆ ಗೊತ್ತಾಗುತ್ತದೆ. 'ಗೀತಗೋಪಾಲಂ' ಎಂಬ ಹೆಸರು ಕೇಳಿದೊಡನೆಯೇ ನಮಗೆ ತಟಕ್ಕನೆ ಜ್ಞಾಪಕಕ್ಕೆ ಬರುವುದು ಜಯದೇವ ಮಹಾಕವಿಯ ಸಂಸ್ಕೃತ ಭಾಷೆಯ "ಗೀತಗೋವಿಂದ" ಪ್ರಬಂಧಕಾವ್ಯ ಎರಡರ ಹೆಸರಲ್ಲೂ ಗೋಪಾಲ, ಗೋವಿಂದ ಎಂಬ ಕೃಷ್ಣನ ನಾಮಾಂತರಗಳು ಕಂಡುಬರುವುದರಿಂದ ಗೀತಗೋಪಾಲವನ್ನು ಗೀತಗೋವಿಂದ ಕನ್ನಡಾನುವಾದವಿರಬಹುದೆಂದು ಊಹಿಸಲವಕಾಶವುಂಟು. ಆದರೆ ವಸ್ತುಸ್ಥಿತಿ ಹಾಗಲ್ಲ. ಗೀತಗೋವಿಂದದ ವಿಚಾರವೇ ಬೇರೆ; ಗೀತ ಗೋಪಾಲದ ಕಾವ್ಯ ಸಾಮಗ್ರಿಯೇ ಬೇರೊಂದು ತೆರ. ಎರಡರಲ್ಲೂ ಕೃಷ್ಣ ಗೋಪಿಯರ ವಿಲಾಸ ವಿಚಾರ ಪ್ರಸ್ತಾಪಿಸಲ್ಪಟ್ಟಿರಬಹುದು. ಆದರೆ ಗೀತಗೋವಿಂದ ಕೃಷ್ಣ ರಾಧೆ ಮತ್ತು ಗೋಪಿಯರು ಇವರ ಕಾಮವಿಹಾರಕ್ಕೇ ಮೀಸಲಾಗಿರುವ ಗ್ರಂಥ. ಶೃಂಗಾರದ ವಿಧಿ ಅವಸ್ಥೆಗಳ ವರ್ಣನೆ ತದ್ವತ್ತಾಗಿ ವಿವರಗೊಂಡಿರುವ ಪ್ರಬಂಧ ಕೃತಿ ಅದು, ಎಂದಾಗ ಇದೊಂದು ಅಶ್ಲೀಲ ಕಾವ್ಯವೆನಿಸುವುದಲ್ಲವೆ ಎಂಬ ಪ್ರಶ್ನೆ ಮೂಡುವುದು ಸಹಜ. ಕೃಷ್ಣನ್ನು ಪರಮಾತ್ಮನೆಂದೇ ಭಾವಿಸಿ ಪೂಜಿಸುವ ನಮ್ಮ ಜನ ಅವನ ರಾಮಲೀಲೆಗಳನ್ನು ಅಶ್ಲೀಲವಾಗಿ ಪರಿಗಣಿಸದೆ ಅದಕ್ಕೆ ಒಂದು ಪಾವಿತ್ರ್ಯದ ಹೊದಿಕೆ

ಹೊದಿಸಿ, ಆದರದಿಂದ ಕಂಡು ಪೂಜ್ಯಭಾವದಿಂದಲೇ ಈ ಕಾವ್ಯವನ್ನು ಸ್ವೀಕರಿಸಿದ್ದಾರೆ. ನಿತ್ಯ ಪಾರಾಯಣಕ್ಕೂ ಅಳವಡಿಸಿಕೊಂಡು ಕೃತಾರ್ಥರಾಗಿದ್ದಾರೆ. ಮುಖ್ಯವಾಗಿ ನಮ್ಮ ಜನರ ಸಂಸ್ಕೃತಿಯ "ಕಾಣುವ ಕಣ್ಣು" ಇದನ್ನು ಪವಿತ್ರ ಗ್ರಂಥವನ್ನಾಗಿ ಕಂಡುಕೊಂಡಿದೆ. ತಮಿಳುನಾಡಿನ ಆಳ್ವಾರ್ ದಿವ್ಯ ಪ್ರಬಂಧಗಳಲ್ಲಿ ಬರುವ ಇಂತಹುದೇ ಪ್ರಸಂಗಗಳನ್ನು ವ್ಯಾಖ್ಯಾನಕಾರರುಗಳಾದ ಆಚಾರ್ಯವರ್ಯರುಗಳು ಭಗವತ್ ಕಾಮವ್ಯಾಪಾರವನ್ನು "ಪೇರಿನ್ಬಂ" ಎಂದೂ ಮಾನವನ ಕಾಮವ್ಯಾಪಾರವನ್ನು "ಚಿಟ್ರಿನ್ಬಂ" ಎಂದೂ ಪರಿಗಣಿಸಿ ವಿವರಣೆ ನೀಡಿದ್ದಾರೆ. "ಪೇರಿನ್ಬಂ" ಎಂದರೆ "ಹಿರಿದಾದ, ಮಹತ್ತಾದ ಕಾಮ" ಎಂಬುದಾಗಿಯೂ "ಚಿಟ್ರಿನ್ಬಂ" ಎಂದಾಗ "ಕಿರಿದಾದ, ಕೀಳಾದ ಕಾಮ" ಎಂಬುದಾಗಿಯೂ ವ್ಯತ್ಯಾಸ ಗುರುತಿಸಿದ್ದಾರೆ. ಐಹಿತ ಕಾಮವ್ಯಾಪಾರವೂ ಮನುಷ್ಯನ ಚತುರ್ವಿಧ, ಪುರುಷಾರ್ಥಗಳಲ್ಲಿ ಒಂದಾಗಿದ್ದು ಅದರ ಅನುಸರಣೆಯಿಂದಲೂ ಮೋಕ್ಷ ಪುರುಷಾರ್ಥ ಸಂಪಾದನೆ ಸಾಧ್ಯವೆಂಬುದಾಗಿ ಅವರು ಭಾಗವತಾದಿ ಪುರಾಣಗಳಿಂದ ದೃಷ್ಟಾಂತಗಳನ್ನು ಉದಾಹರಿಸಿ ಸಿದ್ಧಗೊಳಿಸಿದ್ದಾರೆ. ಅವರ ವಾದದ ಪ್ರಕಾರ ಪರಮಾತ್ಮನೊಬ್ಬನೇ ಪುರುಷ ಮಿಕ್ಕ ಜೀವಾತ್ಮಗಳೆಲ್ಲ ಸ್ತ್ರೀಯರೇ. ಈ ಜೀವಾತ್ಮಗಳ ಗುರಿ – ಗಂತವ್ಯ ಪರಮಾತ್ಮನೊಡನೆ ಸಂಶ್ಲೇಷ ಸೌಖ್ಯ ಹೊಂದುವುದೇ ತಾನೇ. ಇದೇ ಮುಕ್ತಿ ಎಂದು ಅವರು ಪ್ರತಿಪಾದಿಸುತ್ತಾರೆ. ಈ ಮುಕ್ತಿಲಾಭಕ್ಕೆ ಮುಖ್ಯವಾದ ಸುಲಭ ಆಚರಣಾಯೋಗ್ಯವಾದ ಸ್ತರವೇ ಪ್ರಪತ್ತಿ ಮಾರ್ಗ ಎಂದು ಅವರ ತತ್ತ್ವ ವಿವರಣೆ. ಪರಮಾತ್ಮ ಜೀವಾತ್ಮಗಳು ಬೇರೆ ಬೇರೆ ಆದರೂ ಜೀವಾತ್ಮದಿಂದ ಕೂಡಿಯೇ ಪರಮಾತ್ಮ ಅದ್ವೈತನೆನಿಸಿಕೊಳ್ಳುವ ವಿಶಿಷ್ಟ ಲಕ್ಷಣ ಹೊಂದಿರುವುದರಿಂದಲೇ ಈ ಸಿದ್ಧಾಂತ ವಿಶಿಷ್ಟಾದ್ವೈತ ಎನಿಸಿಕೊಂಡಿರುವುದು. ಇದೇ ಈ ಗೋಪೀ ಕೃಷ್ಣ ವಿಲಾಸ ವೈಭವದ ಹಿಂದೆ ಅಡಗಿರುವ ಉಪಾಯ ಭಕ್ತ್ಯಾಚರಣೆ. ಇದರಿಂದಲೇ ಜಯದೇವ ಕವಿಯ ಗೀತ ಗೋವಿಂದ ಕಾವ್ಯಕ್ಕೆ ಪಾವಿತ್ರ್ಯತೆ ಲಭಿಸಿರುವುದು.

ಇನ್ನು ಗೀತಗೋಪಾಲ ಕಾವ್ಯ ಯಾವ ರೀತಿ ಗೀತಗೋವಿಂದ ಕಾವ್ಯದೊಡನೆ ಸಾಮ್ಯತೆ ಮತ್ತು ಭಿನ್ನತೆ ಹೊಂದಿದೆ ಎಂಬುದನ್ನರಿಯಲು ಗೀತಗೋವಿಂದದ ರಚನಾ ಸಂವಿಧಾನವನ್ನು ಮೊದಲು ಅರಿಯಬೇಕಾದುದು ಅತ್ಯವಶ್ಯಕ.

ಗೀತಗೋವಿಂದ ಪ್ರಬಂಧದಲ್ಲಿ ಹನ್ನೆರಡು ಸರ್ಗಗಳಿವೆ. ಪ್ರತಿ ಸರ್ಗದಲ್ಲೂ ಅಷ್ಟಪದಿಗಳೆಂಬ ಗೀತಪ್ರಕಾರಗಳಿವೆ. ಅಷ್ಟಪದಿಗಳು ಎಂದರೆ ಎಂಟು ಅಥವಾ ಒಂಭತ್ತು ದ್ವಿಪದಿಗಳು ಜೋಡಿಸಲ್ಪಟ್ಟ ಗೀತಗಳು. ಈ ಅಷ್ಟಪದಿಗಳ ಕಡೆಯ ದ್ವಿಪದಿಗಳಲ್ಲಿ ಕವಿಯ ಹೆಸರು, ಅಷ್ಟಪದಿಯಲ್ಲಿನ ಭಾವದ ಸಂಕ್ಷಿಪ್ತ ಪರಿಚಯ ಮತ್ತು ಫಲಶೃತಿಗಳು ಇರುತ್ತವೆ. ಪ್ರತಿ ಅಷ್ಟಪದಿಯ ಮೊದಲನೆಯ ದ್ವಿಪದಿಯನಂತರ 'ಧ್ರುವಮ್' ಎಂದು ಹೆಸರಿಸಿರುವ ಒಂದು ಸಾಲಿನ ಪಲ್ಲವಿಯಂತಹ ರಚನೆ ಇರುತ್ತದೆ. ಆದರೆ ಗೀತಗೋವಿಂದದ ಅಷ್ಟಪದಿಗಳನ್ನು ಹಾಡುವವರು ಪ್ರತಿ ದ್ವಿಪದಿಯ ಕಡೆಗೂ ಈ ಧ್ರುವಂ ಅನ್ನು ಹೇಳುವ ಪದ್ಧತಿ ನಾನು ಕೇಳಿಲ್ಲ.

ಕೆಲವು ಸರ್ಗಗಳಲ್ಲಿ ಒಂದೇ ಅಷ್ಟಪದಿ ಇರುತ್ತದೆ. ಕೆಲವದರಲ್ಲಿ ಎರಡಿರುತ್ತವೆ; ಕೆಲವದರಲ್ಲಿ ನಾಲ್ಕು ಅಷ್ಟಪದಿಗಳು ಇರುವುದನ್ನೂ ನಾವು ಕಾಣಬಹುದಾಗಿದೆ. ಹೀಗೆ ಸರ್ಗಗಳಲ್ಲಿ ಅಷ್ಟಪದಿಗಳ ಜೋಡಣೆ ಕ್ರಮಬದ್ಧವಾಗಿಲ್ಲ. ಈ ಅಷ್ಟಪದಿಗಳ ವಿಚಾರ ವಿವರಣೆಯನ್ನು ಮತ್ತು ಅಷ್ಟಪದಿಗೂ

ಇರುವ ಸಂಬಂಧವನ್ನು ಕಲ್ಪಿಸುವ ಶ್ಲೋಕ ವೃತ್ತಗಳು ಅವುಗಳ ಆದಿ ಮತ್ತು ಅಂತ್ಯಗಳಲ್ಲಿ ಇರುವುದನ್ನೂ ನಾವು ನೋಡಬಹುದು. ಇಂತಹ ವೃತ್ತ ಶ್ಲೋಕಗಳು ಅಷ್ಟಪದಿಗಳ ಆರಂಭದಲ್ಲಿ ಒಂದೆರಡಿದ್ದು ಮುಕ್ತಾಯದಲ್ಲಿ ಮೂರು, ನಾಲ್ಕು ಅಥವಾ ಇನ್ನೂ ಹೆಚ್ಚಿಗೆಯೂ ಇರಬಹುದು.

ಹೀಗೆ ಈ ಪ್ರಬಂಧದಲ್ಲಿ ಕಂಡುಬರುವ ಅಷ್ಟಪದಿಗಳ ಒಟ್ಟು ಸಂಖ್ಯೆ ಇಪ್ಪತ್ನಾಲ್ಕು; ಈ ಶ್ಲೋಕಗಳೂ ಮತ್ತು ಅಷ್ಟಪದಿಗಳೂ ಸೇರಿದರೆ ಈ ಪ್ರಬಂಧದಲ್ಲಿರುವ ಒಟ್ಟು ಶ್ಲೋಕಗಳ ಸಂಖ್ಯೆ ಒಂದು ನೂರ ಇಪ್ಪತ್ತಾಗುತ್ತದೆ. ಮೊದಲಿನ ಸರ್ಗದ ಪ್ರಾರಂಭಿಕ ಪೀಠಿಕಾ ಶ್ಲೋಕಗಳ ನಂತರ ಇರುವ ಪ್ರಥಮ ಅಷ್ಟಪದಿಯಲ್ಲಿ ಪರಮಾತ್ಮನ ಹತ್ತು ಅವತಾರಗಳನ್ನು ಹತ್ತು ತ್ರಿಪದಿಗಳಲ್ಲಿ ವರ್ಣಿಸಲಾಗಿದೆ. ಪ್ರತಿ ತ್ರಿಪದಿಯ ಮೂರನೇ ಸಾಲಿನಲ್ಲಿ ಆಯಾ ಅವತಾರದ ಹೆಸರು ಮತ್ತು "ಜಯ ಜಗದೀಶ ಹರೇ" ಎಂಬ ಧ್ರುವ ವಾಕ್ಯವೂ ಇರುತ್ತದೆ. ಈ ಹತ್ತು ತ್ರಿಪದಿಗಳ ನಂತರ ಹತ್ತು ಅವತಾರಗಳ ಹೆಸರನ್ನು ಒಟ್ಟಾಗಿ ಹೇಳಿ ಅವುಗಳ ವೈವಿಧ್ಯ ಸ್ಮರಿಸುವ ವೃತ್ತವೊಂದು ಕೂಡಿಸಲ್ಪಟ್ಟಿದೆ. ಎರಡನೆ ಅಷ್ಟಪದಿಯಲ್ಲಿ ಕೃಷ್ಣನ ಗುಣಮಹಿಮಾ ವರ್ಣನೆಯ ಎಂಟು ದ್ವಿಪದಿಗಳು ಇದ್ದು ಪ್ರತಿದ್ವಿಪದಿಯ ನಾಲ್ಕನೇ ಪಾದ "ಜಯ ಜಯದೇವ ಹರೇ" ಎಂಬ ಭಗವಂತ ಕವಿಯ ಹೆಸರೂ ಆಗಬಲ್ಲ ಶ್ಲೇಷಾರ್ಥದ ನಮನ ಚಮತ್ಕಾರದ ರಚನೆ ಇದೆ. ಮುಂದಿನ ಅಷ್ಟಪದಿಗಳೆಲ್ಲಾ ಗ್ರಂಥಾಂತ್ಯದವರೆಗೂ ಶ್ರೀಕೃಷ್ಣರಾಧೆಯರ ವಿಲಾಸವೈಭವವನ್ನು ತುಂಬಿ ಕವಿಯು ಶೃಂಗಾರದ ವಿವಿಧ ಮಜಲುಗಳ ವರ್ಣನೆಗಳು ರಂಜಿತವಾಗಿಯೂ ಇದ್ದು ಈ ಪ್ರಬಂಧ ಭಾರತೀಯ ಸಾಹಿತ್ಯದಲ್ಲಿ ಚಿರಸ್ಥಾಯಿಯಾಗಿ ಬೆಳಗುವುದರಲ್ಲಿ ಸಂದೇಹವೇ ಇಲ್ಲ. ಜಯದೇವ ತನ್ನ ಪ್ರಬಂಧದಲ್ಲಿನ ಸರ್ಗಗಳಿಗೆ ಕ್ರಮವಾಗಿ ಸಾಮೋದ ದಾಮೋದರ, ಅಕ್ಲೇಶ ಕೇಶವ, ಮುಗ್ಧ ಮಧುಸೂದನ, ಸ್ನಿಗ್ಧ ಮಧುಸೂಧನ, ಸಾಕಾಂಕ್ಷ ಪುಂಡರೀಕ, ಧನ್ಯ ವೈಕುಂಠ ಕುಂಕುಮ, ನಾಗರ ನಾರಾಯಣ, ವಿಲಕ್ಷ್ಯ ಲಕ್ಷ್ಮೀಪತಿ, ಮುಗ್ಧ ಮುಕುಂದ, ಚತುರ ಚತುರ್ಭುಜ, ಸಾನಂದ ದಾಮೋದರ ಮತ್ತು ಸುಪ್ರೀತ ಪೀತಾಂಬರ ಎಂಬ ಹೆಸರುಗಳನ್ನು ಆಕರ್ಷಕ ರೀತಿಯಲ್ಲಿ ನೀಡಿದ್ದಾನೆ. ಕಾಮವಿಹಾರ, ವಿಕಾರಗಳ ವಿವಿಧ ಮಜಲುಗಳಾದ ವಸಂತ ಋತುವಿನ ಕಾಲ, ರಾಧೆಗೆ ಕೃಷ್ಣನೊಡನೆ ಸೇರುವ ತವಕ, ಆತ ಇತರ ಗೋಪಿಯರೊಡನೆ ಲೀಲಾವಿನೋದದಲ್ಲಿದ್ದುದನ್ನು ಕಂಡು ಈರ್ಷೆ, ತನ್ನ ವಿರಹದ ಆವೇಗ ಮತ್ತು ಕೃಷ್ಣನಿಗೆ ತನ್ನ ಮೇಲಿರುವ ಅಲಕ್ಷ್ಯ ಇವುಗಳನ್ನು ಗೆಳತಿಗೆ ವಿವರಿಸುವ ರೀತಿ, ಹಾಗೆ ಹೇಳುವಾಗ ತಾನು ಕೃಷ್ಣನೊಡನೆ ಅನುಭವಿಸಿದ ರತಿ ಸೌಖ್ಯದ ವರ್ಣನೆ, ಕೃಷ್ಣನನ್ನು ಒಪ್ಪಿಸಲು ಸಂಧಾನ, ಆ ಸಖಿ ಕೃಷ್ಣನನ್ನು ಕಂಡು ರಾಧೆಯ ವಿರಹ ತಾಪವನ್ನು ವಿವರಿಸುವುದು, ರಾಧೆಯನ್ನು ಕೂಡುವಂತೆ ಉಪದೇಶ, ಕೃಷ್ಣನಿಗೆ ತಾನು ರಾಧೆಯನ್ನು ದೂರ ಮಾಡಿದ್ದು ತಪ್ಪೆಂದು ತಿಳಿದು ಪರಿತಾಪ ಪಡುವುದು, ಹಾಗೆ ಪರಿತಪಿಸುವಾಗ ತಾನು ಆಕೆಯೊಡನೆ ಅನುಭವಿಸಿದ ಕೇಳಿಗಳನ್ನು ನೆನೆದು ಬಾಧೆ ಪಡುವುದು; ಅವುಗಳನ್ನು ಸಖಿಗೆ ಹೇಳುವುದು, ಸಖಿಯೊಡನೆ ರಾಧೆಯನ್ನು ನಿಗದಿತ ಸ್ಥಳಕ್ಕೆ ತನ್ನೊಡನೆ ಸಂಧಿಸಲು ಆಹ್ವಾನ ನೀಡುವುದು, ರಾಧೆಗೆ ಹೋಗಲು ತವಕ, ಆದರೆ ಆತ್ಮಾಭಿಮಾನದ ತಡೆ; ಆಕೆ ಕೃಷ್ಣನನ್ನು ನಿಂದಿಸುವುದು, ಕೃಷ್ಣನ ಸಮಾಧಾನ, ಕೊನೆಗೆ ಈರ್ವರೂ ಸಂಕೇತ ಸ್ಥಳದಲ್ಲಿ ಗೆಳತಿಯರ ಸಂಧಾನದಿಂದ ಸೇರಿ ಸಮಾಗಮ ಮಾಡಿ ತೃಪ್ತಿ ಹೊಂದುವುದು ಈ ಎಲ್ಲ ವಿವರಗಳೂ ಗೀತ ಗೋವಿಂದದಲ್ಲಿ

ಸಿಗುತ್ತದೆ. ಕವಿಯ ವಚನ ರಚನಾ ವೈಭವದಿಂದ ಗೀತ ಗೋವಿಂದ ಒಂದು ಅಭೂತಪೂರ್ವ ಕಾವ್ಯರತ್ನವಾಗಿ ಏಕಮೇವಾದ್ವಿತೀಯವಾಗಿ ಸಂಸ್ಕೃತ ಸಾಹಿತ್ಯದಲ್ಲಿ ಮೆರೆಯುತ್ತದೆ.

ಆದರೆ ಅದರಲ್ಲಿನ ಅಷ್ಟಪದಿಗಳಿಗೆ ಒಂದೊಂದಕ್ಕೂ ಸಂಬಂಧವಿದೆ. ಅಷ್ಟಪದಿಗಳು ನಮ್ಮ ಸಂಗೀತಗಾರರು ಹಾಡುವ ಕೀರ್ತನೆಗಳಂತೆ ಇರದಿರುವುದರಿಂದ ಈ ಕಾವ್ಯವನ್ನು ಗೇಯಪ್ರಬಂಧವೆಂದು ಪರಿಗಣಿಸಬಹುದಾಗಿದೆ. ಕರ್ನಾಟಕ ಸಂಗೀತದಲ್ಲಿನ ಕೀರ್ತನೆಗಳಂತೆ ಪಲ್ಲವಿ, ಅನುಪಲ್ಲವಿ ಚರಣ (ಎರಡು ಅಥವಾ ಮೂರು ನುಡಿಗಳು)ಗಳ ರೂಪ ಹೊಂದಿದ್ದರೆ ಇವೂ ಮುತ್ತುಸ್ವಾಮಿ ದೀಕ್ಷಿತರ ಅಥವಾ ನಾರಾಯಣ ತೀರ್ಥರ ಅಥವಾ ಸ್ವಾತಿ ತಿರುನಾಳರ ಕೀರ್ತನೆಗಳ ಸೊಗಸನ್ನು ಹೊಂದಿರುತ್ತಿದ್ದುದರಲ್ಲಿ ಸಂದೇಹವೇ ಇಲ್ಲ. ಆದರೆ ಈ ಅಷ್ಟಪತಿಗಳ ಬೆಡಗು ಕಾವ್ಯ ಲಕ್ಷಣ, ಸಾಹಿತ್ಯ ಪ್ರಕಾರದ ಕಡೆಗೇ ಹೆಚ್ಚು ವಾಲುತ್ತದೆ ಎಂದು ಲಾಕ್ಷಣಿಕರು ಅಭಿಪ್ರಾಯ ಹೊಂದಿದ್ದಾರೆ. ಸಂಗೀತದಲ್ಲಿ ಈ ರೀತಿಯ ಕೀರ್ತನೆಗಳ ರಚನೆಗಳು ಬರುವುದಕ್ಕೆ ಮುಂಚೆ ಅಷ್ಟಪದಿಗಳೇ ರಾಜಸಭೆಗಳಲ್ಲಿ, ನರ್ತಕಿಯರ ಅಭಿನಯದಲ್ಲಿ ರಸಿಕರ ಕೂಟಗಳಲ್ಲಿ ಹಾಡಲ್ಪಡುತ್ತಿದ್ದುದು ತಿಳಿದ ವಿಚಾರವೇ ಆಗಿದೆ. ಈ ರೀತಿಯ ಕೀರ್ತನ ನಿರ್ಮಾಣ ಪದ್ಧತಿ ನಮಗೆ ಗೊತ್ತಾಗಿರುವಂತೆ ಪ್ರಪ್ರಥಮ ಹರಿದಾಸರೆಂದು ಗುರುತಿಸಲಾಗಿರುವ ೧೨-೧೩ನೇ ಶತಮಾನದ ನರಹರಿತೀರ್ಥರಿಂದಲೇ ಆರಂಭಗೊಂಡಿದೆಯೆಂದು ಊಹಿಸಲವಕಾಶವಾಗುತ್ತದೆ. ಆದರೆ ಅವರ ಕೀರ್ತನೆಗಳು ಲಭ್ಯವಾಗಿಲ್ಲ. ಒಂದೆರಡು ಅವರದ್ದೆಂದು ಹೇಳಲ್ಪಟ್ಟರೂ ಅದಕ್ಕೆ ಸ್ಪಷ್ಟ ಸಾಕ್ಷ್ಯಪುರಾವೆಗಳು ಸಾಲದಾಗಿವೆ. ಆದರೆ ಹರಿದಾಸರಲ್ಲಿ ಪ್ರಥಮ ಕೃತಿಕಾರರೆನಿಸಲ್ಪಡುವ ಶ್ರೀಪಾದರಾಯರ ಕೃತಿ ಚಿಕದೇವ ರಾಜೊಡೆಯರ ಗೀತಗೋಪಾಲ ಪ್ರಬಂಧದಲ್ಲಿ ಇಂತಹ ಲಕ್ಷಣಗಳಿಂದ ಕೂಡಿದ ಕೀರ್ತನೆಗಳು ಮೊದಲಿಂದ ಕಡೆಯವರೆಗೂ ತುಂಬಿಕೊಂಡಿವೆ. ಇವುಗಳಲ್ಲಿ ಕೆಲವು ಕೀರ್ತನೆಗಳಿಗೆ ಪರಸ್ಪರ ಸಂಬಂಧವಿರುವುದೆಂದು ಕಂಡರೂ ಪ್ರತಿಯೊಂದು ಗೀತಗಳೂ ಸ್ವತಂತ್ರವಾದ ಹಾಡುಗಳಂತೆಯೇ ವಿಷಯ ವಸ್ತುಗಳನ್ನು ಹೊಂದಿವೆ. ತ್ಯಾಗರಾಜರ ನೌಕಾಚರಿತ್ರೆಯಿಂದ, ನಾರಾಯಣ ತೀರ್ಥರ ಕೃಷ್ಣ ಲೀಲಾ ತರಂಗಿಣಿಯಿಂದ ಆರಿಸಿಕೊಂಡ ಕೀರ್ತನೆಗಳನ್ನು ಪ್ರತ್ಯೇಕ ಹಾಡುಗಳಂತೆಯೇ ನಮ್ಮ ವಿದ್ವಾಂಸರು ಕಛೇರಿಗಳಲ್ಲಿ ಹಾಡುವಂತೆ ಗೀತಗೋಪಾಲದ ಈ ಕೀರ್ತನೆಗಳನ್ನೂ ಪ್ರತ್ಯೇಕ ಕೃತಿಗಳಂತೆಯೇ ಸಂಗೀತಗಾರರು ಹಾಡಲು ಯಾವ ಅಡ್ಡಿಯೂ ಇಲ್ಲ. ಇದೇ ನಾವು ಕಾಣುವ ಗೀತಗೋವಿಂದ ಗೀತಗೋಪಾಲಗಳಲ್ಲಿನ ಸಾಮ್ಯ ವ್ಯತ್ಯಾಸಗಳು.

ನಾವೀಗ ಗೀತಗೋಪಾಲದ ಅಧ್ಯಯನಕ್ಕೆ ತೊಡಗೋಣ. ಗೀತಗೋಪಾಲವನ್ನು ಎರಡು ವಿಭಾಗಗಳಾಗಿ ವಿಂಗಡಿಸಿದ್ದಾರೆ. ಪೂರ್ವಭಾಗ, ಉತ್ತರ ಭಾಗವೆಂದು ಅವುಗಳನ್ನು ಕರೆದಿದ್ದಾರೆ. ಇಲ್ಲಿನ ಗೀತಗಳನ್ನು ಸಪ್ತಪದಿಗಳೆಂದು ಕರೆದಿದ್ದಾರೆ. ಈ ಪ್ರಬಂಧದ ಲಕ್ಷಣವನ್ನು ಈ ಪ್ರಬಂಧವನ್ನು ಮೊದಲಿಗೆ ಮುದ್ರಣ ಕಾಣಿಸಿದ ಕರ್ನಾಟಕ ಕಾವ್ಯ ಕಲಾನಿಧಿ ಕಾರ್ಯಾಲಯದ ವ್ಯವಸ್ಥಾಪಕರುಗಳೂ ಕನ್ನಡ ಸಾಹಿತ್ಯ ಸೇವಕರುಗಳೂ ಕನ್ನಡ ಭಾಷೆಯ ಪ್ರಾತಃಸ್ಮರಣೀಯರುಗಳೂ ಆದ ಎಂ.ಎ. ರಾಮಾನುಜಯ್ಯಂಗಾರ್ಯರೂ, ಎಸ್.ಜಿ. ನರಸಿಂಹಾಚಾರ್ಯರೂ ಅದರ ಮುನ್ನುಡಿಯಲ್ಲಿ ಈ ರೀತಿ ವಿವರಿಸಿದ್ದಾರೆ. ಈ ಪೀಠಿಕೆಯು ಕಿರಿದಾದರೂ ಅನೇಕ ವಿಚಾರಗಳಿಂದ ಕೂಡಿರುವುದರಿಂದ ಅದನ್ನೇ ಇಲ್ಲಿ ಉದ್ಧರಿಸಲು ಆಶಿಸುತ್ತೇನೆ.

"ಕರ್ನಾಟಕ ಮಂಡಲಾಧೀಶ್ವರ ಶ್ರೀ ಚಿಕದೇವ ಮಹಾರಾಜ ವಿರಚಿತನಾದ ದಿವ್ಯ ಪ್ರಬಂಧಗಳಲ್ಲಿ ಈ ಗ್ರಂಥವು ಒಂದಾಗಿದೆ. ಈ ಗ್ರಂಥದ ರಚನೆಯ ವಿಷಯವಾಗಿ ಕವಿಯು ತನ್ನ ಉದ್ದೇಶವನ್ನು ಗ್ರಂಥಾದಿಯಲ್ಲಿ ಈ ರೀತಿ ಹೇಳಿಕೊಳ್ಳುತ್ತಾನೆ.

ಅನವಧಿದಯದಿಂದೀ ಪರಿ
ಜನಮನಿತುಮನರಸುಗೆಯ್ತದಿಂ ಪೊರೆದಿಹದೊಳ್ ।
ನೆನೆದಂ ಪರಸುಖಮನವ
ರ್ಗನುಗೊಳಿಪಿರವಾವುದೆಂದು ಚಿಕದೇವೇಂದ್ರಂ ॥

ಪರಿಕಿಸೆ ಪರಿಕಿಸೆ ಕವಿಯೊಳ್
ಪರಾಶರವ್ಯಾಸ ಮುಖ್ಯ ಮುನಿಸಮ್ಮತದಿಂ ।
ಹರಿಸಂಕೀರ್ತನಮೊಂದೆ
ಪರಸತಿಗನುಕೂಲಮೆಂದು ನಿರವಿಸಿನೆಗಟ್ಟಿಂ ॥

ಪಾಲಂ ಬಯಸಿದ ರೋಗಿಗೆ
ಪಾಲಿಂದೌಷಧಮನೀವ ವೈದ್ಯನ ತೆಱದಿಂ ।
ದೀಲೋಗರೊಲ್ವ ಗೀತದ
ಮೂಲದೊಳೇ ಮುಕ್ತಿಗತಿಯಮೊಗದೋಜಿಸಿದಂ ॥

ತೊಡರ್ದಿರೆ ನುಡಿನುಣ್ಬರಗಳ
ಬೆಡಂಗುಮನಮೊಲ್ದು ಗೀತ ಗೋಪಾಲ ವೆಸ ।
ರ್ವಡೆದೊಳ್ಗನ್ನಡ ಗಬ್ಬಮ
ಗೊಡರಿಸಿ ಚಿಕದೇವರಾಯನುನ್ನತಿವೆತ್ತಂ ॥

'ಗೀತಗೋಪಾಲ ಮಹಾಪ್ರಬಂಧ' ಎಂದು ಕವಿ ತಾನೇ ಹೇಳುವುದರಿಂದ ಈ ಗ್ರಂಥವನ್ನು ಮಹಾಪ್ರಬಂಧಗಳ ಗಣನೆಯಲ್ಲಿ ಸೇರಿಸುತ್ತಾನೆಂದು ತೋರುತ್ತದೆ. ಕವಿಯು ಈ ಗ್ರಂಥದಲ್ಲಿ ಪ್ರಸಿದ್ಧವಾದ ಜಯದೇವನ ಗೀತಗೋವಿಂದ ಕಾವ್ಯದ ಕ್ರಮವನ್ನನುಸರಿಸಿ "ಗೋಪಿಕಾ ವೃತ್ತಾಂತ ನಿರೂಪಣಾ ವ್ಯಾಜದಿಂಭಗವದ್ಗುಣಂಗಳಂ", "ಮೋಕ್ಷೋಪಾಯಮಂ ಸಾಧಿಪುದರ್ಕೆ ಉಪಾಯ ಮಾದ ಪ್ರಪತ್ತಿ ಸ್ವರೂಪಮಂ" ಕೀರ್ತನೆಗಳ ದ್ವಾರಾ ನಿರೂಪಿಸಿ, ತನ್ಮೂಲಕ ವೇದಾಂತ ತಾತ್ಪರ್ಯಾರ್ಥವನ್ನು ಸಂಗ್ರಹಿಸಿ ಹೇಳುತ್ತಾನೆ.

ಈ ಗ್ರಂಥದಲ್ಲಿ ಪೂರ್ವ, ಉತ್ತರ ಎಂಬುದಾಗಿ ಎರಡು ಭಾಗಗಳಿವೆ. ಪ್ರತಿ ಭಾಗಗಳಲ್ಲಿ ಏಳೇಳು ಖಂಡಗಳಿವೆ. ಈ ಪ್ರತಿಖಂಡಗಳಲ್ಲಿ ಏಳೇಳು "ಪದ"ಗಳಿವೆ. ಹೀಗಿರುವುದರಿಂದ ಪ್ರತಿಖಂಡಕ್ಕೂ 'ಸಪ್ತಪದಿ' ಎಂಬ ಹೆಸರನ್ನು ಕವಿ ನೀಡಿದ್ದಾನೆ. ಒಂದೊಂದು ಸಪ್ತಪದಿಯಲ್ಲಿ ಒಂದೊಂದು ವಿಷಯ ಹೇಳಲ್ಪಟ್ಟಿದೆ. ಆಯಾ ವಿಷಯಗಳ ಸಾರಾಂಶವು ಆಯಾ ಸಪ್ತಪದಿಗಳ ಆದಿಯಲ್ಲಿ ವಚನ ರೂಪದಲ್ಲಿ ಬರೆಯಲ್ಪಟ್ಟಿದೆ. ಈ ಗ್ರಂಥದ ಕೀರ್ತನೆಗಳಲ್ಲಿ ಇತಿಹಾಸ ಪುರಾಣಾದಿಗಳಲ್ಲಿ ಕಂಗೊಳಿಸುವ ಭಾಗವತೋತ್ತಮರ ಸೂಕ್ತ್ಯಭಿಪ್ರಾಯಗಳೂ, 'ಆಳ್ವಾರ್' ಎಂಬ ನಾಮದಿಂದ ಪ್ರಸಿದ್ಧರಾದ ಭಕ್ತಾಗ್ರಗಣ್ಯರ ಶ್ರೇಷ್ಠವಾದ ಅಭಿಪ್ರಾಯಗಳೂ ಸಹ ಅಡಕವಾಗಿವೆ.

ಪ್ರತಿಯೊಂದು ಕೀರ್ತನೆಯಲ್ಲಿಯೂ ಪಲ್ಲವಿ, ಚರಣಗಳು ಇವೆ. ಕೀರ್ತನೆಗಳನ್ನು ಹಾಡಲು

ಸಂಖ್ಯೆಯ ಶಾಸನದ ೧೭ರಿಂದ ೨೨ರ ಪಂಕ್ತಿಗಳು ಗದ್ಯದಂತೆ ಅಚ್ಚಾಗಿದ್ದವು. ಡಿ.ಎಲ್.ಎನ್. ಅವರು ಈ ಶಾಸನದ ಪಂಕ್ತಿಗಳನ್ನು ಓದಿ ಅಲ್ಲಿರುವ ಪ್ರಾಸಗಳನ್ನು ಗಮನಿಸಿ ಅವು ಪದ್ಯ ರೂಪಗಳಾಗಿವೆ ಎಂದು ಪರಿಗಣಿಸಿ ಗದ್ಯದ ಸಾಲುಗಳನ್ನು ೩ ಪದ್ಯಗಳನ್ನಾಗಿ ಪುನರ್ರಚಿಸಿದರು. ನಿದರ್ಶನಕ್ಕೆ:

ರಾಜಿತ ಭುವನಕ್ಕೆ
ವಾಜಿಗಾಗರವಲ್ಲಿ
ರಾಜಧಾನಿಯವೆನಿಪ ಚಟಿತಾಣ
ರಾಜ ಸೇವ್ಯ ಪ್ರಭು
ರಾಜ ಚಟ್ಟನ ಪುತ್ರ
ರಾಜಿತ ಕೀರ್ತಿ ವಿಳಾಸಂ ದಾಸ

ಈ ಮೂರು ಪದ್ಯಗಳ ಛಂದಸ್ಸನ್ನು ಪರಿಷ್ಕರಿಸಿ ಅಂಶ ಛಂದಸ್ಸಿನ ದೃಷ್ಟಿಯಿಂದ ಅಲ್ಪಸ್ವಲ್ಪ ಮಾರ್ಪಾಡು ಮಾಡಿ ಇವು ಅಂಶ ಷಟ್ಪದದ ಲಕ್ಷಣಗಳನ್ನು ಹೋಲುತ್ತವೆ ಎಂಬುದನ್ನು ತೋರಿಸಿ ಕೊಟ್ಟಿದ್ದಾರೆ. ವಿದ್ವಾಂಸರು ಪರಿಶೋಧಿಸಿದ ಅಂಶ ಷಟ್ಪದಿಯ ಪ್ರಯೋಗಗಳಲ್ಲಿ ನಾಲ್ಕು ಪ್ರಯೋಗಗಳನ್ನು ಇವರೇ ಶೋಧಿಸಿದ್ದಾರೆಂಬುದು ಗಮನಿಸತಕ್ಕ ಸಂಗತಿಯಾಗಿದೆ.

ಕುಮುದೇಂದು ರಾಮಾಯಣದ ಪರಿಷ್ಕರಣದ ವಿಚಾರದಲ್ಲಿ ಈ ಗ್ರಂಥದೊಳಗೆ ಪರಿವರ್ಧಿನಿ ಷಟ್ಪದಿ ಸಂಧಿಗಳು ಬಂದಲ್ಲೆಲ್ಲಾ ಅಶುದ್ಧವಾಗಿರುವುದು. ಪದ್ಯದ ಆರನೆಯ ಚರಣವು ೨, ೩, ೪, ೫, ೬ ಮಾತ್ರೆಗಳಿಂದ ದೀರ್ಘವಾಗಿ ಹೋಗಿರುವುದರಿಂದ ಈ ಗ್ರಂಥದಲ್ಲಿಯ ಮುಖ್ಯ ಸಮಸ್ಯೆಯಾದ ಪರಿವರ್ಧಿನಿ ಷಟ್ಪದಿಯ ಲಕ್ಷಣವೇನು? ಎಂಬುದರ ಬಗೆಗೆ ಚರ್ಚಿಸಿದ್ದಾರೆ. ಕುಮದೇಂದುವಿನ ಕಾಲದಲ್ಲಿ ಅಂಶಗಣ ಮಾತ್ರಾಗಣಕ್ಕೆ ಪೂರ್ತಿಯಾಗಿ ತಿರುಗಿರಲಿಲ್ಲವೆಂದೂ ಆದ್ದರಿಂದಲೇ ಅವನು ಆರನೆಯ ಪಾದದ ಅಂತ್ಯದಲ್ಲಿ ಬ್ರಹ್ಮಗಣವನ್ನಿಟ್ಟರೆ ಪದ್ಯ ಹೇಗೆ ಎಂಬುದನ್ನು ಪರೀಕ್ಷಿಸುವುದಕ್ಕಾಗಿ ತನ್ನ ಷಟ್ಪದಿಯಲ್ಲಿ ಈ ತೆರನಾದ ಪದ್ಯಗಳನ್ನು ಬಳಸಿದ್ದಾನೆ ಎಂಬುದನ್ನು ನಿದರ್ಶನ ಸಹಿತ ಸೂಚಿಸಿದ್ದಾರೆ. ಹಳೆಯ ಅಂಶಗಣಪದ್ಧತಿ ರೂಪಾಂತರವನ್ನು ಹೊಂದುವ ಸಂಧಿಕಾಲದಲ್ಲಿ ಕುಮದೇಂದುವಿನ ಕಾವ್ಯ ರಚನೆ ನಡೆಯಿತು. ಹೀಗಾಗಿ ರಾಘವಾಂಕ ಕುಮಾರ ಪದ್ಮರಸ ಷಟ್ಪದಿಗಳಲ್ಲಿಯ ನಿರ್ದಿಷ್ಟ ಮಾತ್ರಾಗಣ ವ್ಯವಸ್ಥೆಯ ಹಾಗೆ ಕುಮದೇಂದು ರಾಮಾಯಣದ ಷಟ್ಪದಿಯ ಕೊನೆಯ ಚರಣಗಳಲ್ಲಿ ನಿರ್ದಿಷ್ಟ ಮಾತ್ರಾ ವ್ಯವಸ್ಥೆ ಇಲ್ಲ ಎಂಬುದನ್ನು ಗುರುತಿಸಿದ್ದಾರೆ. ಅತ್ಯಂತ ಪ್ರಾಚೀನ ಪರಿವರ್ಧಿನಿ ಷಟ್ಪದಿಯನ್ನು ಮೊದಲಿಗೆ ಕುಮದೇಂದುವೇ ಬಳಸಿರುವುದು ಎಂಬುದನ್ನು ಆಧಾರ ಸಹಿತವಾಗಿ ಗುರುತಿಸಿದ್ದಾರೆ.

ಕ್ರಿ.ಶ. ೧೧ನೆಯ ಶತಮಾನದಲ್ಲಿ ತಳಂಗೆರೆ ಶಾಸನದ ಛಂದಸ್ಸಿನ ಮಹತ್ವದ ಬಗ್ಗೆ ವಿದ್ವತ್ಪೂರ್ಣವಾದ ಲೇಖನವನ್ನು ಎನ್. ಲಕ್ಷ್ಮೀನಾರಾಯಣರಾವ್ ಅವರೊಂದಿಗೆ ಬರೆದಿದ್ದು ಎಪಿಗ್ರಾಫಿಯಾ ಇಂಡಿಕಾ ಪತ್ರಿಕೆಯಲ್ಲಿ ಪ್ರಕಟಿಸಿದ್ದಾರೆ. ಈ ಶಾಸನವು ಉತ್ಸಾಹ ಛಂದಸ್ಸಿನಲ್ಲಿ ರಚಿತವಾಗಿದ್ದನ್ನು ಗುರುತಿಸಿದ್ದಾರೆ. ಟಿ.ವಿ. ವೆಂಕಟಾಚಲಶಾಸ್ತ್ರೀಗಳ ಕನ್ನಡ ಛಂದಸ್ಸು ಪುಸ್ತಕಕ್ಕೆ ಬರೆದಿರುವ ಬೆಲೆಬಾಳುವ ಮುನ್ನುಡಿಯಲ್ಲಿ ಛಂದಸ್ಸಿಗೆ ಸಂಬಂಧಿಸಿದ ಹಲವು ನೂತನ ಸಂಗತಿಗಳ ಸುಳುಹುಗಳನ್ನು ಪ್ರಸ್ತಾಪಿಸಿದ್ದಾರೆ.

ಛಂದಸ್ ಶಾಸ್ತ್ರದಲ್ಲಿ ಪ್ರಕಾಂಡ ಪಂಡಿತರಾಗಿದ್ದ ಡಿ.ಎಲ್.ಎನ್. ಅವರಿಗೆ ಎಲ್ಲಾ ಛಂದೋ ಪ್ರಕಾರಗಳು ಅವರ ತುದಿನಾಲಿಗೆಯಲ್ಲಿ ನರ್ತಿಡುತ್ತಿದ್ದವಂತೆ ಎಂಬುದಾಗಿ ಜಿ. ಬ್ರಹ್ಮಪ್ಪನವರು ಒಂದೆಡೆ ದಾಖಲಿಸಿದ್ದಾರೆ. ಇವರು ಎಂ.ಎ. ತರಗತಿಗಳಲ್ಲಿ ಛಂದಸ್ಸನ್ನು ಕುರಿತು ಪಾಠ ಹೇಳಿದ ಟಿಪ್ಪಣಿಗಳೇ ಆಕರಗ್ರಂಥಗಳಾಗುತ್ತವೆ. ಛಂದಸ್ಸಿನ ಬಗೆಗೆ ಅವರು ತಯಾರಿಸಿದ್ದ ಟಿಪ್ಪಣಿಗಳ ವಿಷಯದಲ್ಲಿ ಅವರಿಗೆ ಪೂರ್ಣ ವಿಶ್ವಾಸವಿದ್ದಿತಂತೆ. ಕೆಲವನ್ನು ತಿದ್ದಿ ವಿಷಯಗಳನ್ನು ಅನುಕ್ರಮವಾಗಿ ಬರೆದು ಪ್ರಕಟಿಸಬೇಕೆನ್ನುವ ಉದ್ದೇಶ ಅವರಿಗಿದ್ದಿತು. ಪೀಠಿಕೆಗಳು ಲೇಖನಗಳು ಗ್ರಂಥ ಪ್ರಕಟವಾದ ತಕ್ಷಣ ಆ ಕೆಲಸವನ್ನು ಅವರು ಮಾಡಬೇಕೆಂದು ಇದ್ದರಂತೆ. ಆದರೆ ಈ ಕೆಲಸವನ್ನು ಪ್ರಾರಂಭಿಸುವುದಕ್ಕೆ ಮೊದಲೇ ವಿಧಿವಶರಾದುದು ಕನ್ನಡ ಛಂದಸ್ಸಿನ ಅಧ್ಯಯನಕ್ಕೆ ತುಂಬಲಾರದ ನಷ್ಟವೇ ಸರಿ.

ಛಂದಸ್ಸನ್ನು ಕುರಿತಾದ ಇವರ ಸಂಶೋಧನಾ ಲೇಖನಗಳು ಕನ್ನಡ ಛಂದಸ್ಸಿನ ಬಗೆಗೆ ಅಮೂಲ್ಯವಾದ ವಿಚಾರಗಳನ್ನು ತಿಳಿಸುವುದರ ಜೊತೆಗೆ ಮುಂದಿನವರು ಈ ಕ್ಷೇತ್ರದಲ್ಲಿ ಹೆಚ್ಚಿನ ಸಂಶೋಧನೆಯನ್ನು ಕೈಗೊಂಡು ವಿಸ್ತರಿಸಲು ಸೋಪಾನವಾಗಿದೆ.

**ಸಂಸ್ಕೃತಿ ಕುರಿತ ಸಂಶೋಧನೆ**

ಡಿ.ಎಲ್.ಎನ್. ಅವರ ಸಂಶೋಧನೆಯು ಮಾಹಿತಿಯ ಹಾಗೂ ವರ್ಣನೆಯ ನೆಲೆಯನ್ನು ದಾಟಿ ವ್ಯಾಖ್ಯಾನ – ವಿಶ್ಲೇಷಣೆಯ ನೆಲೆಯನ್ನು ಕೆಲವೆಡೆ ತಲುಪಿದೆ. ಅನೇಕ ಮೂಲಗಳಿಂದ ಆಕರಗಳನ್ನು ಆಯ್ದುಕೊಂಡು ಕಣ್ಣೆದುರು ಹರಡಿಕೊಂಡು ಸಂಸ್ಕೃತಿಯನ್ನು ಬಿಡಿಯಾಗಿ ಕಟ್ಟಲು ಪ್ರಯತ್ನಿಸಿರುವುದನ್ನು ಇವರ ಲೇಖನಗಳು ಸಾಬೀತು ಪಡಿಸುತ್ತವೆ. ವಿವಿಧ ಮೂಲಗಳಿಂದ ಆಕರಗಳನ್ನು ಸಂಗ್ರಹಿಸಿದ ರೀತಿ, ಪಟ್ಟ ಪರಿಶ್ರಮ, ರೂಪಿಸಿದ ಸಂಯೋಜನ ಕ್ರಮ, ಮಾಡಿದ ತರ್ಕ, ಎತ್ತಿದ ಸಮಸ್ಯೆಗಳು ಮುಂದಿನ ಸಂಶೋಧನೆಗೆ ಪ್ರೇರಣೆಯನ್ನು ನೀಡಿದವು.

ಡಿ.ಎಲ್.ಎನ್. ಅವರ ಸಂಸ್ಕೃತಿಯನ್ನು ಕುರಿತಾದ ಸಂಶೋಧನಾ ಲೇಖನಗಳನ್ನು ಎರಡು ರೀತಿಯಲ್ಲಿ ಗುರುತಿಸಬಹುದಾಗಿದೆ.

೧) ಚರಿತ್ರೆಯ ಒಂದು ಭಾಗವಾಗಿ ಸಂಸ್ಕೃತಿಯನ್ನು ಪರಿಗಣಿಸಿ ರಚಿಸಿದ ಅರಸು ಮನೆತನಗಳ ಕಾಲದ ಧರ್ಮ–ಸಾಹಿತ್ಯ–ಸಂಸ್ಕೃತಿಯನ್ನು ಕುರಿತಾದ ಲೇಖನಗಳು.

೨) ಸಾಂಸ್ಕೃತಿಕ ಅಭಿವ್ಯಕ್ತಿಯ ವಿವಿಧ ರೂಪಗಳಾದ ಭಾಷಿಕ ಸಂಕೇತಗಳು, ದೈವಗಳನ್ನು ಕುರಿತ ಸಂಕೇತನಿಷ್ಠ ಪರಿಭಾಷೆ ಸಂಪ್ರದಾಯ ಆಚರಣೆಗೆ ಸಂಬಂಧಿಸಿದ ಕೆಲವು ವಿಶಿಷ್ಟ ಶಬ್ದಗಳ ಅರ್ಥ ಹಾಗೂ ನಿಷ್ಪತ್ತಿಯ ಕುರಿತಾದ ಲೇಖನಗಳು.

ಕರ್ನಾಟಕ ಪರಂಪರೆ ಭಾಗ – ೨ರಲ್ಲಿಯ ಇವರ ಶಾತವಾಹನರ ಕಾಲದ ಕರ್ನಾಟಕದ ಧರ್ಮ ಮತ್ತು ಸಮಾಜ ಲೇಖನವು ಕರ್ನಾಟಕ ಸಾಂಸ್ಕೃತಿಕ ಪರಂಪರೆಯ ದೃಷ್ಟಿಯಿಂದ ಪ್ರಾಮುಖ್ಯತೆಯನ್ನು ಪಡೆದಿದೆ. ಸು. ೪೫೦ ವರ್ಷಗಳ ಕಾಲ ಆಳಿದ ಶಾತವಾಹನರ ಕಾಲದ ವಿರಳವಾಗಿ ದೊರೆತಿರುವ ಶಾಸನಗಳು, ನಾಣ್ಯಗಳು, ಸ್ಮಾರಕಗಳು ಇತ್ಯಾದಿ ಸಾಕ್ಷ್ಯಾಧಾರಗಳನ್ನು ಆಧರಿಸಿ ಆ ಕಾಲದ ಸಾಂಸ್ಕೃತಿಕ ಇತಿಹಾಸವನ್ನು ಕಟ್ಟಿಕೊಟ್ಟಿದ್ದಾರೆ. ಶಾತವಾಹನರ ಕಾಲದ

ಸಾಂಸ್ಕೃತಿಕ ಚರಿತ್ರೆಯೆಂದರೆ ಬಹುಮಟ್ಟಿಗೆ ನೂರಾರು ವರ್ಷಗಳಲ್ಲಿ ಕ್ರಮಕ್ರಮವಾಗಿ ಸ್ಥಳೀಯ ವೈಶಿಷ್ಟ್ಯಗಳನ್ನು ಅರಗಿಸಿಕೊಂಡು ಹರಡುತ್ತಿದ್ದ ಆರ್ಯ ಸಂಸ್ಕೃತಿಯ ಅಭಿವೃದ್ಧಿಯೆಂದೇ ಹೇಳಬಹುದು ಎಂದು ಗುರುತಿಸಿದ್ದಾರೆ. ಅವರ ಕಾಲದ ಬೌದ್ಧಧರ್ಮ, ವೈದಿಕಧರ್ಮ, ಜೈನಧರ್ಮ ಸಾಮಾಜಿಕ ಪರಿಸ್ಥಿತಿ ಭಾಷೆ ಮತ್ತು ಸಾಹಿತ್ಯಗಳ ಕುರಿತು ಪರಿಚಯಿಸಿದ್ದಾರೆ. ಶಾಸನಗಳೆಲ್ಲವೂ ಪ್ರಾಕೃತಭಾಷೆಯಲ್ಲಿದ್ದುದರಿಂದ ಪ್ರಾಕೃತವು ರಾಜ್ಯದ ಅಧಿಕೃತ ಭಾಷೆಯಾಗಿತ್ತೆಂದೂ, ಕನ್ನಡ ಅಥವಾ ತೆಲುಗು ಎಂದು ನಿರ್ದಿಷ್ಟವಾಗಿ ಗುರುತಿಸಬಹುದಾದ ಯಾವುದೇ ಶಬ್ದ, ಸ್ಥಳನಾಮ, ವ್ಯಕ್ತಿನಾಮಗಳು ಯಾವುವೂ ಆ ಕಾಲದ ಶಾಸನಗಳಲ್ಲಿ ಕಂಡು ಬರುವುದಿಲ್ಲ ಎಂಬ ನಿಲುವು ಈಗಲೂ ಸ್ವೀಕರಾರ್ಹವಾಗಿದೆ.

ವಿಜಯನಗರ ಅರಸರ ಕಾಲದ ಕನ್ನಡ ಸಾಹಿತ್ಯ ಲೇಖನದಲ್ಲಿ ಸುಮಾರು ಎರಡೂವರೆ ಶತಮಾನಗಳ ಕಾಲದ ಸಾಹಿತ್ಯ ಚಟುವಟಿಕೆಗಳಲ್ಲಿ ಗ್ರಹಿತವಾದ ಅಂಶಗಳು ವಿಜಯನಗರದ ಸಂಸ್ಕೃತಿ ಕಲೆಗಳ ಉಚ್ಚ ಹಾಗೂ ಪರಿಪೂರ್ಣ ಅಭಿವ್ಯಕ್ತಿಯ ಗುರುತಿಸುವಲ್ಲಿ ಸಹಾಯಕವಾಗಿದೆ ಎಂಬ ಅಂಶವನ್ನು ಗುರುತಿಸಿದ್ದಾರೆ. ಆಂಗ್ಲಭಾಷೆಯಲ್ಲಿರುವ ಇಮ್ಮಡಿ ಅರಕೇಸರಿಯ ವಂಶಾವಳಿ ಲೇಖನವು ವೇಮುಲವಾಡದ ಚಾಲುಕ್ಯರ ಕಾಲದ ಚರಿತ್ರೆಯ ಮೇಲೆ ಬೆಳಕು ಚೆಲ್ಲುವ ಸ್ಥಿತಿಯಲ್ಲಿದೆ. ಜಯಕರ್ನಾಟಕ ಪತ್ರಿಕೆಯಲ್ಲಿ ಪ್ರಕಟಗೊಂಡ ಲಿಂಗಾರ್ಚನೆ ಮತ್ತು ಲಿಂಗಾರಾಧನೆ ಲೇಖನವು ಆಗಿನ ಕಾಲದ ಸೀಮಿತ ಆಕರಗಳ ಹಿನ್ನೆಲೆಯಲ್ಲಿಯೂ ವೀರಶೈವ ಸಂಸ್ಕೃತಿಯ ಮೇಲೆ ಬೆಳಕು ಚೆಲ್ಲುವಂತಾಗಿದೆ.

ಜಕ್ಕಣಾಚಾರ್ಯ ಎಂಬ ಲೇಖನದಲ್ಲಿ ಹೊಯ್ಸಳ ದೇವಾಲಯಗಳ ಕಟ್ಟಿದ ಶಿಲ್ಪಿಯೆಂದು ಐತಿಹ್ಯವಿರುವ ಜಕ್ಕಣಾಚಾರ್ಯರ ಬಗೆಗೆ ಚರ್ಚಿಸುತ್ತಾ ಜಕ್ಕಣ್ಣ, ಜಕ್ಕಣಾಚಾರ್ಯ, ಜಕ್ಕಪ್ಪ ಎಂಬುವು ಕನ್ನಡಿಗರಲ್ಲಿ ಬಹಳ ಬಳಕೆಯಾಗಿರುವ ಹೆಸರುಗಳು. ಈ ಹೆಸರಿನ ಶಿಲ್ಪಿಗಳು ಇದ್ದಾರೆಂಬುದನ್ನು ಶಾಸನಗಳ ಉಲ್ಲೇಖದಿಂದ ತೋರಿಸಿಕೊಟ್ಟು ಜಕ್ಕಣ್ಣ ಎಂಬ ಹೆಸರು ಕನ್ನಡಿಗರಿಗೆ ಸೇರಿದ್ದೆಂದೂ ಆ ಹೆಸರುಗಳುಳ್ಳವರಲ್ಲಿ ಹಲವರು ಶಿಲ್ಪಿಗಳು ಆಗಿದ್ದರು ಎಂಬುದನ್ನು ನಿರೂಪಿಸಿದ್ದಾರೆ. ಜಕಣಾಚಾರಿ ಹೆಸರಿನ ಒಬ್ಬ ವ್ಯಕ್ತಿ ಇದ್ದು ಒಂದೆರಡು ಚೆನ್ನಕೇಶವ ದೇವಾಲಯಗಳನ್ನು ಕಟ್ಟಿದ ನಂತರ ಅದೇ ಜನರ ಬಾಯಲ್ಲಿ ನಿಂತು ಕಥೆಗಳ ಐತಿಹ್ಯಗಳ ರೂಪದಲ್ಲಿ ಜಕಣಾಚಾರಿ ನಿಂತಿದ್ದಾನೆ ಎಂಬುದನ್ನು ತೋರಿಸಿಕೊಟ್ಟಿದ್ದಾರೆ.

ಕನ್ನಡ ಭಾಷೆಯ ಪ್ರಾಚೀನ ಪರಂಪರೆಯ ದ್ಯೋತಕವಾದ 'ಇಸಿಲ' ಶಬ್ದವನ್ನು ತಮಿಳು ಮುಂತಾದ ಭಾಷಾಕೋಶಗಳ ಆಧಾರದ ಹಿನ್ನೆಲೆಯಲ್ಲಿ ಅಚ್ಚಗನ್ನಡದ ಸ್ಥಳವಾಚಿ ಎಂಬುದಾಗಿ ಗುರುತಿಸಿದ್ದು, ಕ್ಷೌರದಂಗಡಿಯಲ್ಲಿ ಕ್ಷೌರಮಾಡಿಸಿಕೊಳ್ಳುವ ಸಂದರ್ಭದಲ್ಲಿ 'ಇಸಿಲ' ಅಚ್ಚಗನ್ನಡ ಸ್ಥಳವಾಚಿ ಪದ ಎಂಬ ಸೂಚನೆ ಅವರಿಗೆ ಹೊಳೆಯಿತಂತೆ. ಹೀಗಾಗಿ ಇಂದು ಕನ್ನಡ ಭಾಷೆಯ ಪ್ರಾಚೀನತೆಯ ಬಗೆಗೆ ಚರ್ಚಿಸುವಾಗ ಬ್ರಹ್ಮಗಿರಿ ಶಾಸನದಲ್ಲಿ ಬರುವ 'ಇಸಿಲ' ಶಬ್ದ ಕನ್ನಡದ ತೇದಿಯುಳ್ಳ ಅತ್ಯಂತ ಪ್ರಾಚೀನತಮ ಪದವಾಗಿ ಬಳಕೆಯಾಗಿದೆ ಎಂದು ಮೇಲಿಂದ ಮೇಲೆ ಮಾತನಾಡುತ್ತೇವೆ.

ಕನ್ನಡ ಪದಗಳ ಭಾವಕೋಶ, ಅರ್ಥಕೋಶ ಜಿಜ್ಞಾಸೆಯಲ್ಲಿ ತೊಡಗಿಕೊಂಡು ಬಹುಕಾಲ

ಅರ್ಥವಾಗದೆ ಉಳಿದಿದ್ದ ಕೆಲವು ವಿಶಿಷ್ಟ ಪದಗಳಿಗೆ ಜನತೆಯೊಂದಿಗೆ ಬೆರೆತ ಸಂದರ್ಭದಲ್ಲಿ ಉಂಟಾದ ಅನುಭವಗಳ ಮೂಲಕ ಅರ್ಥವನ್ನು ಬಿಡಿಸಿರುವುದನ್ನು ಕಾಣಬಹುದಾಗಿದೆ.

ರಾಘವಾಂಕನ ಹರಿಶ್ಚಂದ್ರ ಕಾವ್ಯದಲ್ಲಿ ಮೇಗಾಳಿ, ಕಿಗ್ಗಾಳಿ ಎಂಬ ಪದಗಳ ಬಳಕೆ ಇತ್ತು. ಒಂದು ಕಾಲದಲ್ಲಿ ಬಳಕೆಯಲ್ಲಿದ್ದು ಕಣ್ಮರೆಯಾಗಿದ್ದ ಈ ಪದಗಳಿಗೆ ಯಾವ ನಿಘಂಟಿನಲ್ಲಿಯೂ ಅರ್ಥ ಇರಲಿಲ್ಲ. ಅರ್ಥ ತಿಳಿಯದ ಕಗ್ಗಂಟಾಗಿದ್ದ ಈ ಪದಗಳ ಅರ್ಥವನ್ನು ಬೇಸಿಗೆ ರಜದಲ್ಲಿ ಹಳ್ಳಿಗೆ ಹೋದಾಗ ಉಂಟಾದ ಅನುಭವದ ಮೂಲಕ ಪರಿಹರಿಸಿದ್ದಾರೆ.

ಪಟ್ಟಣ ಬಿಟ್ಟು ಹಳ್ಳಿಗೆ ಹೋಗಬೇಕಾದ ಅವಕಾಶ ಒದಗಿದಾಗ (೧೯೪೧) ಆ ಹಳ್ಳಿಯ ಸುತ್ತಲೂ ಬೆಟ್ಟಗಳ ಸಾಲು, ಕಣಿವೆಗಳಲ್ಲಿ ದಟ್ಟವಾದ ಕಾಡು ಇದ್ದಿತು, ನಾಲ್ಕಾರು ಬಂಧುಗಳೊಡನೆ ಅಲ್ಲೆಲ್ಲಾ ಸುತ್ತಾಡಿ ಒಂದೆಡೆ ವಿಶ್ರಮಿಸಿಕೊಳ್ಳುತ್ತಿರುವಲ್ಲಿ ಅವರ ನಂಟರೊಬ್ಬರು ತಮ್ಮ ಬೇಟೆಯ ಅನುಭವವನ್ನು ಹೇಳುವ ಸಂದರ್ಭದಲ್ಲಿ 'ಹುಲಿ ಹೊಂಚು ಕಾದು ಹಸುವನ್ನು ಹೇಗೆ ಹಿಡಿದು ಕೊಲ್ಲುತ್ತದೆಂಬುದನ್ನು ಮೈದುಂಬಿ ವರ್ಣಿಸುತ್ತ ಹುಲಿ ಕಿಗ್ಗಾಳಿಗೆ ಬಂತು' ಎಂದು ಅಭಿನಯಿಸಿ ತೋರಿಸಿದರಂತೆ. ಬಹುಕಾಲದಿಂದಲೂ ಡಿ.ಎಲ್.ಎನ್. ಅವರನ್ನು ಪೀಡಿಸುತ್ತ ಈ ಪದ ನಂಟರೊಬ್ಬರ ಬೇಟೆಯ ಅನುಭವದ ಸಂದರ್ಭ ಪ್ರಸ್ತಾಪಿಸಲ್ಪಟ್ಟಾಗ ಎದ್ದು ಕುಣಿದಾಡುತ್ತ ಅವರ ಕೈ ಹಿಡಿದು ಸ್ವಾಮಿ ಕೊಂಚ ತಾಳಿ ಕಿಗ್ಗಾಳಿ ಎಂದರೆ ಏನು? ಎಂದು ಕೇಳಿದರಂತೆ. ಅವರು ನಕ್ಷೆ ಬರೆದು ಅದನ್ನು ವಿವರಿಸಿದರಂತೆ. ಅರ್ಥ ತಿಳಿದಿಲ್ಲ ಎಂದು ಭಾವಿಸಿದ್ದ ಈ ಪದಗಳಿಗೆ ಡಿ.ಎಲ್.ಎನ್. ಅವರು ನಂತರ ವಿವರಣೆಯೊಂದಿಗೆ ಅರ್ಥಗಳನ್ನು ನೀಡಿದರು. ಬೇಟೆಯಾಡುವ ಮೃಗದ ಮೇಲಿಂದ ಬೇಟೆಗೆ ಗುರಿಯಾದ ಪ್ರಾಣಿಯ ಕಡೆಗೆ ಬೀಸುವ ಗಾಳಿಗೆ ಮೇಗಾಳಿಯೆಂದೂ, ಪ್ರಾಣಿಯ ಕಡೆಯಿಂದ ಆ ಮೃಗದ ಕಡೆಗೆ ಬೀಸುವ ಗಾಳಿಗೆ ಕಿಗ್ಗಾಳಿಯೆಂದೂ ಎಂಬ ವಿವರಣೆಯನ್ನು ಕೊಟ್ಟಿದ್ದಾರೆ.

ವಡ್ಡಾರಾಧನೆ, ಪಂಪಭಾರತ ಹಾಗೂ ಸಮಯ ಪರೀಕ್ಷೆಗಳಲ್ಲಿ ಬಳಸಲ್ಪಟ್ಟಂತಹ 'ಒಲ್ಲಣಿಗೆ' ಎಂಬ ಪದಕ್ಕೆ ಬೇರೊಬ್ಬ ವಿದ್ವಾಂಸರು 'ಆದ್ರವಸ್ತ್ರ' ಎಂದು ಊಹಿಸಿದ್ದನ್ನು ಪರಿಶೀಲಿಸಿ ತುಳುಭಾಷೆಯ ನಿಘಂಟಿನ ಸಹಾಯವನ್ನು ಪಡೆದು 'ಮೀಯುವಾಗ ಉಡುವ ಜಾಳು ಜಾಳಾದ ಬಟ್ಟೆ' ಎಂಬ ಅರ್ಥವನ್ನು ಕೊಡಮಾಡಿದ್ದಾರೆ.

ಬಾದುಬ್ಬೆ ಶಬ್ದವು ಗ್ರಾಮದೇವತೆಯ ಹೆಸರು ಎಂಬುದನ್ನು ಶಾಸನಗಳು ಹಾಗೂ ಹಳಗನ್ನಡ ಕೃತಿಗಳಲ್ಲಿಯ ಉಲ್ಲೇಖಗಳ ಆಧಾರದಿಂದ ನಿರೂಪಿಸಿದ್ದಾರೆ. ಕ್ರಿ.ಶ. ೯೭೨ರ ಅಮೋಘವರ್ಷದ ಶಾಸನದಲ್ಲಿಯ 'ಬಾದುಬ್ಬೆಯ ಪರ್ವ', ಕ್ರಿ.ಶ. ೧೦೯೯ರ ಕಂದಮರಸನ ಬಳ್ಳಿಗಾವೆಯ ಶಾಸನದಲ್ಲಿಯ 'ಬಾದುಂಬೆಯ ನೀಂ ಬಡಗಲ್', ಕ್ರಿ.ಶ. ೧೦೮೫ರ ಕುರಗೋಡು ಶಾಸನದ ಬಾದುಂಬೆಯ ನೀಂ ಬಡಗಣ' ಎಂಬ ಹಾಗೂ ಸಮಯಪರೀಕ್ಷೆಯಲ್ಲಿಯ ಬಾದುಂಬೆಗೆ ಸಾವಿರವಂ ಎಂಬ ಉಲ್ಲೇಖಗಳನ್ನಾಧರಿಸಿ ಬಾದುಬೆ ದೇವತೆಯ ಹೆಸರು, ಆ ದೇವತೆಗಾಗಿ ಬಿಟ್ಟ ಭೂದಾನಗಳು ಬಾದುಂಬೆಯ ಪಾಳು ಎಂಬುದಾಗಿ ಸೂಚಿಸಿದ್ದಾರೆ. ಅದೇ ರೀತಿ ಕನ್ನಡ ನಾಡಿನಲ್ಲಿ ಅಲ್ಲಲ್ಲಿ ಕಂಡು ಬರುತ್ತಿದ್ದವು ಎಂದು ಹೇಳಲಾದ ಜನಪದ ದೇವತೆಗಳಾದ ಬಳಾರಿ, ಮಾರಿ, ಕಾಳಿ ಮುಂತಾದ ದೇವತೆಗಳು ಹಾಗೂ ಅವುಗಳ ಪೂಜಾ ಪದ್ಧತಿಯನ್ನು ನಯಸೇನನ ಧರ್ಮಾಮೃತ ಕೃತಿಯ ಹಿನ್ನೆಲೆಯಲ್ಲಿ ವಿಶ್ಲೇಷಿಸುತ್ತಾರೆ.

ಅಗ್ರಹಾರ ಶಬ್ದವನ್ನು ಕುರಿತು ಚರ್ಚಿಸುವಾಗ ಅನೇಕ ಶಾಸನಗಳಲ್ಲಿಯ ಉಲ್ಲೇಖಗಳನ್ನಾಧರಿಸಿದ್ದಾರೆ. ಅಗ್ರಹಾರ ಶಬ್ದವು ಅಗ್ರ + ಆಹಾರ ಎಂಬ ಎರಡು ಶಬ್ದಗಳಿಂದ ಕೂಡಿದ ಸಮಸ್ತ ಪದವೆಂದು ಆಹಾರ ಎಂಬುದು ವಿಷಯ ವಾಚಕವೆಂದೂ ಆಹಾರದ ಸವೆದ ರೂಪ ಹಾರವೆಂದೂ ಆ ಸಮಸ್ತರೂಪ ಸೌಲಭ್ಯಾಕಾಂಕ್ಷೆಯ ಮೂಲಕ ಅಗ್ರಾಹಾರ ಎಂಬುದು ಅಗ್ರಹಾರ ಎಂಬ ರೂಪವನ್ನು ತಾಳಿದೆಯೆಂಬ ಅಭಿಪ್ರಾಯವನ್ನು ವ್ಯಕ್ತಪಡಿಸಿದ್ದಾರೆ. ಅವರ ನಿಲುವನ್ನು ನಂತರದ ವಿದ್ವಾಂಸರು ಒಪ್ಪದೆ ಬೇರೆ ನಿಲುವನ್ನು ತಾಳಿದ್ದಾರೆ. ಅಗ್ರಹಾರ ಸಮಾಸವನ್ನು ಅಗ್ರ + ಹಾರ ಎಂದು ಬಿಡಿಸಿದ್ದು (ಹಾಗ>ಹೃ>ಕೊಡು, ತೆಗೆದು ಕೊ) (ಅಗ್ರ – ಶ್ರೇಷ್ಠ) ಅಗ್ರಹಾರ ಬ್ರಾಹ್ಮಣರಿಗೆ ಕೊಟ್ಟ ಕೊಡುಗೆಗಳನ್ನು ಹೇಳುತ್ತದೆ.

ಮದನಾವತಾರ ಎಂಬ ಪದದ ಅರ್ಥವನ್ನು ಚರ್ಚಿಸುವಾಗ ಅದು ಒಂದು ಬಗೆಯ ಛತ್ರಿಯ ಹೆಸರೆಂದು ಸೂಚಿಸುತ್ತಾರೆ. ಕನ್ನಡ ನಾಡಿನ ಅರಸರು ತಮ್ಮ ಆಸ್ಥಾನಕವಿಗಳಿಗೆ ಗೌರವ ಸೂಚಕವಾಗಿ ಅದನ್ನು ಕೊಡುತ್ತಿದ್ದರು ಎಂಬುದಾಗಿ ಗುರುತಿಸಿದ್ದಾರೆ. ಪ್ರಾಚೀನ ಕಾವ್ಯಗಳಲ್ಲಿ ಬಳಕೆಯಾಗಿರುವ ಕಾರೋಹಣದ ಪಟೆಯ ಬಗೆಗೆ ವಿವೇಚಿಸುತ್ತ ಕಾರೋಹಣ ಎಂಬ ಊರಿನಲ್ಲಿ ತಯಾರಾದ ವಸ್ತ್ರವೆಂದು ಹೇಳಿದ್ದಾರೆ. ಹತ್ತನೆಯ ಶತಮಾನದಲ್ಲಿ ಕಾರೋಹಣ ಎಂಬ ಊರಿನಲ್ಲಿ ಉತ್ತಮ ಗುಣಮಟ್ಟದ ಬಟ್ಟೆಗಳು ತಯಾರಾಗುತ್ತಿದ್ದಿರಬೇಕು ಎಂಬುದು ಇದರಿಂದ ವ್ಯಕ್ತವಾಗುತ್ತದೆ. 'ಬರಡಗೆ' ಅಪೂರ್ವ ಶಬ್ದದ ಬಗೆಗೆ ಹೇಳುತ್ತ ಬರಡಗೆ ಎಂದರೆ ಮರದ ದಿಮ್ಮಿಗಳಿಂದ ಕಟ್ಟಿದ ಕೋಟೆ ಎಂತಲೂ, ಪಟಂಗಾಸು ಎಂಬುದು ನಾಣ್ಯಕ್ಕೆ ಉಪಯೋಗಿಸುತ್ತಿದ್ದ ಚಿನ್ನ ಎಂಬುದನ್ನು ಆಧಾರಗಳಿಂದ ಸ್ಪಷ್ಟಪಡಿಸುತ್ತಾರೆ.

ಶಾಸನ ಹಾಗೂ ಕಾವ್ಯಗಳಲ್ಲಿ ಬಹಳಷ್ಟು ಸಲ ಉಲ್ಲೇಖಗೊಂಡಿರುವ ವಡ್ಡವಾರ ಪದದ ಅರ್ಥವನ್ನು ಶನಿವಾರ ದಿವಸ ಭಿಕ್ಷೆ ಬೇಡಲು ಬಂದ ಹಳ್ಳಿಯ ಹೆಂಗಸೊಬ್ಬಳು ಇವರ ಮನೆಯ ಹತ್ತಿರ ಬಂದು ಬುದ್ಧಿ ಇವತ್ತು ವಡ್ಡವಾರ ಅಕ್ಕಿಕೊಡಿ ಎಂದು ಕೇಳಿದ ಹೇಳಿಕೆಯ ಆಧಾರದ ಮೇಲೆ ವಡ್ಡವಾರಕ್ಕೆ ಶನಿವಾರ ಎಂದು ಅರ್ಥೈಸುತ್ತಾರೆ.

ಗೋವಿನ ಹಾಡಿನಲ್ಲಿ ಆರಂಭದಲ್ಲಿ ಬರುವ

> ಉದಯಕಾಲದೊಳೆದ್ದು ಗೊಲ್ಲನು
> ಮುದದಿ ತಿಲಕವ ಹಣೆಯೊಳಿಟ್ಟು
> ಚದುರ ಶಿಖೆಯನು ಹಾಕಿದ

ಎಂಬ ಸಾಲಿನಲ್ಲಿಯ ಚದುರ ಶಿಖೆಯನು ಹಾಕಿದ ಎಂಬುದಕ್ಕೆ ಬದಲಾಗಿ ಚದುರಸಿಗೆಯನು ಹಾಸಿದ ಎಂದು ಪುನರ್ರಚಿಸಿರುವುದು ಜನಪದ ಸಂಸ್ಕೃತಿಯ ಚಿತ್ರಣದಲ್ಲಿಯ ಅವರ ಆಸಕ್ತಿಯನ್ನು ಸೂಚಿಸುತ್ತದೆ. ಜನಪದ ಕಾವ್ಯವಾದ ಗೋವಿನ ಹಾಡಿನ ಚದುರಸಿಗೆ ಪದ ಅರ್ಥವಾಗದೆ ಚದುರ ಶಿಖೆಯನ್ನು ಹಾಕಿದ ಎಂದು ಪಾಠ ಬದಲಿಸಿದ್ದಾರೆ. ವಾಸ್ತವವಾಗಿ ಉದಯ ಕಾಲ ದಲ್ಲೆದ್ದ ಗೊಲ್ಲ ಹಣೆಗೆ ತಿಲಕವನ್ನಿಟ್ಟುಕೊಂಡು ಗೋವುಗಳನ್ನು ಮೇಯುವುದಕ್ಕೆ ಬಿಟ್ಟು ತಾನು ನಾಲ್ಕು ಮೂಲೆಗಳನ್ನುಳ್ಳದ್ದು ಅಂದರೆ ಚೌಕವಾದ ವಸ್ತ್ರವೊಂದನ್ನು ನೆಲದ ಮೇಲೆ ಹಾಸಿ ಕುಳಿತುಕೊಂಡ ಎಂಬ ಅರ್ಥಬರುವ ಚದುರಸಿಗೆ ಪದವನ್ನು ಪುನರ್ರಚನೆಯ ಪಾಠದಲ್ಲಿ ಬಳಸಿದ್ದಾರೆ. ಅವರ ಗ್ರಾಮೀಣ ಸಂಸ್ಕೃತಿಯ ಬಗೆಗಿನ ತಿಳಿವಳಿಕೆಯನ್ನು ಇದು ಸಾಬೀತು ಪಡಿಸುತ್ತದೆ.

ಪೊರಸು ಶಬ್ದದ ವಿಚಾರವಾಗಿ ಇವರು ವಡ್ಡಾರಾಧನೆ, ಪಂಪಭಾರತ, ಗದಾಯುದ್ಧ, ಸೂಕ್ತಿಸುಧಾರ್ಣವ, ಧರ್ಮಾಮೃತ, ಪಂಚತಂತ್ರ, ಜಗನ್ನಾಥ ವಿಜಯ, ಯಶೋಧರ ಚರಿತೆ, ಸಮಯಪರೀಕ್ಷೆ ಮುಂತಾದ ಚಂಪೂಕೃತಿಗಳಲ್ಲಿ ಪ್ರಕಟವಾಗಿರುವುದನ್ನು ಗುರುತಿಸಿ ವಿಭಿನ್ನ ಅರ್ಥಗಳನ್ನು ನೀಡಿದ್ದಾರೆ. ರೇಫೆಯುಕ್ತವಾದ ಪೊರಸು ಪದ ಪಾರಿವಾಳ ಎಂಬ ಅರ್ಥವನ್ನು ಕೊಡುತ್ತದೆಂದೂ ಪಾರಿವಾಳವು ಹತ್ತನೆಯ ಶತಮಾನದಲ್ಲಿ ಅಪಶಕುನದ ಹಕ್ಕಿಯೆಂದು ಜನತೆಯ ನಂಬಿಕೆಯಲ್ಲಿದ್ದಿತು ಎಂದು ಗುರುತಿಸಿದ್ದಾರೆ. ಶಕಟರೇಫೆಯುಕ್ತ 'ಪೊಱಸು' ಶಬ್ದ ಹಗ್ಗದಿಂದ ಮಾಡಿದ ಮಂಚ ಎಂಬ ಅರ್ಥವನ್ನು ಪಡೆದುಕೊಳ್ಳುತ್ತದೆ ಎಂಬುದನ್ನು ತೋರಿಸಿಕೊಟ್ಟಿದ್ದಾರೆ.

ಪ್ರಾಚೀನ ಸಂಸ್ಕೃತಿಯ ಪ್ರತೀಕಗಳಾದ ಕೆಲವು ಶಬ್ದಗಳ ಮೂಲವನ್ನು ಕೆದಕಿ, ಬೆದಕಿ, ಸಿಕ್ಕು ಬಿಡಿಸಿ ತಲಸ್ಪರ್ಶಿಯಾಗಿ ಪರಿಶೀಲಿಸಿ ಅವುಗಳ ಮೌಲ್ಯವನ್ನು ನಿರ್ಧರಿಸುವುದರ ಮೂಲಕ ಅವುಗಳ ಮಹತ್ವವನ್ನು ಸಾಬೀತು ಪಡಿಸಿದ್ದಾರೆ. ಆ ಶಬ್ದಗಳು ಪ್ರಾಚೀನ ಕಾಲದ ಜನಜೀವನದ ಪ್ರತೀಕಗಳಾಗಿರುವುದರ ಜೊತೆಗೆ ಅವು ಯಾವ ರೀತಿ ಕನ್ನಡಿಗರ ಆಚಾರ, ವಿಚಾರ ನಂಬಿಕೆಗಳ ಮೇಲೆ ಬೆಳಕು ಚೆಲ್ಲುತ್ತವೆ ಎಂಬುದನ್ನು ತಿಳಿಯಲು ಸಹಾಯಕವಾಗಿವೆ. ಸಾಂಸ್ಕೃತಿಕ ನೆಲೆಗಟ್ಟಿನಲ್ಲಿ ಕೊಡಮಾಡಲು ಪ್ರಯತ್ನಿಸಿರುವ ಶಬ್ದಗಳ ಅರ್ಥ – ನಿಷ್ಪತ್ತಿಗಳು ದಿಢೀರನೆ ನಿರ್ಧರಿತವಾದವುಗಳಲ್ಲ. ಯಾವಾಗಲೋ ಸಮಸ್ಯೆಯಾಗಿ ಕಾಡಿದ ಅವರ ಚಿತ್ತದಲ್ಲಿ ಸುಪ್ತವಾಗಿದ್ದು ಅವಕಾಶ ದೊರಕಿದಾಗ ರೂಪಿತವಾದವುಗಳು. ಹೀಗಾಗಿ ಈ ಪದಗಳ ಅರ್ಥನಿಷ್ಪತ್ತಿಯಲ್ಲಿ ಬಹಳಷ್ಟು ವರ್ಷಗಳು ಸಂದಿವೆ ಎಂಬುದನ್ನು ಮರೆಯುವಂತಿಲ್ಲ.

ಮೈಸೂರಿನ ಪ್ರಾಚ್ಯಸಂಶೋಧನಾ ಸಂಸ್ಥೆಯಲ್ಲಿಯ ಸಿದ್ಧರಾಮನ ಸಾಂಗತ್ಯ ಎಂಬ ಹಸ್ತಪ್ರತಿಯನ್ನು ಪರಿಶೀಲಿಸಿ ಅದನ್ನು ರಾಘವಾಂಕನ ಸಿದ್ಧರಾಮನ ಚರಿತೆಯೊಂದಿಗೆ ಹೋಲಿಸಿ ಈ ಸಾಂಗತ್ಯ ಪ್ರಕಾರದ ಕೃತಿಯು ಹಾಲುಮತದ ಉತ್ಪತ್ತಿ ನಿರೂಪಣಾರ್ಥವಾಗಿದ್ದು ಇದನ್ನು ಮಂಕಯ್ಯನ ಚರಿತೆಯೆಂದು ಕರೆಯಬಹುದಾಗಿದೆಯೆಂಬ ನಿರ್ಣಯವನ್ನು ಮಾಡುತ್ತಾರೆ. ಈ ಮರುಳಮಂಕಯ್ಯನೇ ಹಾಲುಮತ ಸಮುದಾಯದ ಗೌಡಕುಲಕ್ಕೆ ಆದ್ಯನೆಂಬುದು ಮತ್ತು ಇದೇ ಆ ಸಮುದಾಯಕ್ಕೆ ಹೆಮ್ಮೆಯ ಸಂಗತಿ ಎಂಬುದನ್ನು ೧೯೬೭ರಲ್ಲಿಯೇ ಪ್ರಸ್ತಾಪಿಸಿದ್ದಾರೆ. ಮುಂದೆ ಹಾಲುಮತ ಪುರಾಣಗಳಾದ ಸಿದ್ಧಮಂಕ ಚರಿತೆ ಮತ್ತು ತಗರಪವಾಡ ಕೃತಿಗಳು ಸಂಪಾದನೆಗೊಂಡು ಪ್ರಕಟಗೊಳ್ಳಲು ಕಾರಣೀಭೂತರಾದರು.

ಡಿ.ಎಲ್.ಎನ್. ಅವರು ಪಂಪಕವಿಯ ವಿಕ್ರಮಾರ್ಜುನ ವಿಜಯವನ್ನು ತಲಸ್ಪರ್ಶಿಯಾಗಿ ಅಧ್ಯಯನ ಮಾಡಿ ಸಿದ್ಧಪಡಿಸಿದ್ದ ಪಂಪ ಭಾರತ ದೀಪಿಕೆ ಅವರ ಪಾಂಡಿತ್ಯಕ್ಕೆ ಒರೆಗಲ್ಲಾಗಿದೆ. ಈ ದೀಪಿಕೆಯಲ್ಲಿ ಕೊಡಮಾಡಿರುವ ಶಬ್ದಾರ್ಥನಿರ್ಣಯಗಳಲ್ಲಿ ಬಹಳಷ್ಟು ಪಂಪನು ಜೀವಿಸಿದ್ದ ಯುಗಧರ್ಮದ ಹಿನ್ನೆಲೆಯಲ್ಲಿ ರಚಿತವಾದವುಗಳಾಗಿವೆ. ಸಂಸ್ಕೃತಿಯನ್ನು ಕುರಿತಾದ ಅವರ ಬರೆಹಗಳು ಸ್ವಲ್ಪವೇ ಆದರೂ ಅವೆಲ್ಲವೂ ಚೊಕ್ಕವೂ ಚಿಕ್ಕವೂ ಆಗಿವೆ. ಸತತವಾದ ಚಿಂತನೆ, ಅಭ್ಯಾಸಗಳ ದೀರ್ಘ ಸಂಶೋಧನೆಯ ಫಲವಾಗಿ ಹೊರ ಹೊಮ್ಮಿದವುಗಳಾಗಿವೆ. ಒಂದೊಂದೂ ಶಬ್ದ ಯಾವ ಜಿಲ್ಲೆಯ ಯಾವ ಊರಿನ ಯಾವ ಸ್ಥಳದ ಶಾಸನದಲ್ಲಿದೆ, ಯಾವ ಕಾವ್ಯದ

ಯಾವ ಸಂದರ್ಭದಲ್ಲಿದೆ ಎಂಬುದು ನಾಲಿಗೆಯ ತುದಿಯಲ್ಲಿಯೇ ಕಂಡು ಬರುತ್ತಿದ್ದುದು ಅವರ ಸ್ಮರಣಶಕ್ತಿಯ ದ್ಯೋತಕವಾಗಿದೆ.

ಇವತ್ತಿನ ದಿನಮಾನಗಳಲ್ಲಿ ನಿಂತು ಡಿ.ಎಲ್.ಎನ್. ಅವರ ಸಂಶೋಧನೆಯನ್ನು ಕುರಿತು ಮಾತನಾಡುವಾಗ ಕೆಲವರು ಇವರು ನಡೆಸಿದ ಶೋಧಗಳು ತೀರ ಸಾಂಪ್ರದಾಯಿಕ ನೆಲೆಗಳಲ್ಲಿ ಇರತಕ್ಕವು ಎಂದು ಭಾವಿಸಿದ್ದಾರೆ. ಆದರೆ ಡಿ.ಎಲ್.ಎನ್. ಅವರು ಉಪೇಕ್ಷೆಗೆ ಒಳಗಾಗಿರುವ ಅಲಕ್ಷಿತ ನೆಲೆಯಲ್ಲಿರುವ ಜ್ಞಾನಕ್ಷೇತ್ರಗಳಲ್ಲಿ ನಡೆಸಿದ ಚಿಂತನೆ – ಜಿಜ್ಞಾಸೆಗಳು ಕನ್ನಡ ಭಾಷೆ, ಸಾಹಿತ್ಯ – ಸಂಸ್ಕೃತಿಯ ಅನನ್ಯತೆಯನ್ನು, ಅಂತಃಶಕ್ತಿಯನ್ನು ಶೋಧಿಸುವಂತಹವು. ಇವರ ಶೋಧನೆಗಳು ಕೇವಲ ತಾರ್ಕಿಕ, ಶಬ್ದಾಡಂಬರಗಳಾಗಿರದೆ ಸಾಂಸ್ಕೃತಿಕ ಜಿಜ್ಞಾಸೆಯಿಂದ ಕೂಡಿರುವಂತಹವುಗಳು. ಇವರ ಬಹುಪಾಲು ಸಂಶೋಧನೆಯು ಕನ್ನಡ ಸಾಹಿತ್ಯ – ಸಂಸ್ಕೃತಿಯ ಒಡಲೊಳಗಿಂದಲೇ ರೂಪುಗೊಂಡಿರುವುಗಳಾಗಿವೆ.

ಒಟ್ಟಾರೆ ಡಿ.ಎಲ್.ಎನ್. ಸಾಹಿತ್ಯ – ಸಂಸ್ಕೃತಿ ಕುರಿತಾದ ಪರಂಪರೆಯ ಮಹಾಮಾರ್ಗವೊಂದನ್ನು ರೂಪಿಸಿದವರು. ಸತತ ಅಭ್ಯಾಸದ ಪ್ರಯತ್ನದಿಂದಾಗಿ ಬಹುಕ್ಷೇತ್ರಗಳ ಜ್ಞಾನವನ್ನು ಅರಗಿಸಿಕೊಂಡ ಇವರು ಕನ್ನಡಭಾಷೆ – ಸಾಹಿತ್ಯ – ಸಂಸ್ಕೃತಿ ಕ್ಷೇತ್ರಗಳಿಗೆ ಸಂಬಂಧಿಸಿದಂತೆ ಅಧ್ಯಯನದ ವಿಧಾನಗಳನ್ನು ಸ್ವತಂತ್ರವಾಗಿ ರೂಪಿಸಿಕೊಟ್ಟವರು. ಶಿಷ್ಯಪರಂಪರೆಯನ್ನು ಹುಟ್ಟುಹಾಕಿ ಕನ್ನಡ ಸಂಶೋಧನೆ ಮತ್ತು ಸಾಂಸ್ಕೃತಿಕ ಕ್ಷೇತ್ರಗಳನ್ನು ವಿಸ್ತರಿಸುವ ಕೆಲಸವನ್ನು ಮಾಡಿದರು. ದುರ್ದೈವದ ಸಂಗತಿ ಎಂದರೆ ಇಂದು ಅವರ ಆಸಕ್ತ ಕ್ಷೇತ್ರಗಳಲ್ಲಿ ವಿರಳವಾಗಿ ಸಂಶೋಧನೆಯನ್ನು ಕೈಗೊಂಡಿರುವವರನ್ನು ಅನಾದರಣೆ, ಅಸಡ್ಡೆಯಿಂದ ಕಾಣುತ್ತಿರುವುದು. ಇಪ್ಪತ್ತನೆಯ ಶತಮಾನದ ಎಂಟನೆಯ ದಶಕದವರೆಗೂ ಶ್ರೀಮಂತವಾಗಿದ್ದ ಇವರ ಮೆಚ್ಚಿನ ಸಂಶೋಧನಾಕ್ಷೇತ್ರವು ಪ್ರಶಿಷ್ಯ ಪರಂಪರೆಯ ಕೊರತೆಯಿಂದಾಗಿ ಬರಡಾಗಿದೆ.

**ಗ್ರಂಥಋಣ**


೧) ಪೀಠಿಕೆಗಳು – ಲೇಖನಗಳು (ಸಂಶೋಧನಾ ಲೇಖನಗಳ ಸಂಗ್ರಹ) ಡಿ.ವಿ.ಕೆ. ಮೂರ್ತಿ ಪ್ರಕಾಶನ, ಕೃಷ್ಣಮೂರ್ತಿಪುರಂ, ಮೈಸೂರು ೧೯೭೧

೨) ಶಬ್ದವಿಹಾರ, ಶಾರದಾಮಂದಿರ, ಮೈಸೂರು, ೧೯೫೬

೩) ಕನ್ನಡ ಗ್ರಂಥಸಂಪಾದನೆ, ಶಾರದಾಮಂದಿರ, ಮೈಸೂರು, ೧೯೬೪

೪) ಕನ್ನಡ ನುಡಿ (ಡಿ.ಎಲ್.ಎನ್. ಸ್ಮರಣ ಸಂಚಿಕೆ) ಸಂ. ೩೪, ಸಂ. ೧೫ ಕನ್ನಡ ಸಾಹಿತ್ಯ ಪರಿಷತ್, ಬೆಂಗಳೂರು, ಆಗಸ್ಟ್ ೧೯೭೧

೫) ಡಿ.ಎಲ್. ನರಸಿಂಹಾಚಾರ್ ಶತಮಾನ ಸ್ಮರಣೆ ಸಂ.: ಎಫ್.ಟಿ. ಹಳ್ಳಿಕೇರಿ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ ಹಂಪಿ, ವಿದ್ಯಾರಣ್ಯ, ೨೦೦೫




# ಶತಮಾನ ಕಂಡ ಶಿವನಸಮುದ್ರದ ಜಲವಿದ್ಯುದಾಗಾರ

• *ಆರ್. ವೆಂಕಟೇಶಮೂರ್ತಿ*

**ಕೋ**ಲಾರದ ಚಿನ್ನದ ಗಣಿಗೆ ವಿದ್ಯುತ್ತನ್ನು ಒದಗಿಸಲು ಶಿವನಸಮುದ್ರ ವಿದ್ಯುತ್ ಉತ್ಪಾದನಾ ಕೇಂದ್ರದ ಯೋಜನೆಯು ಕ್ರಿ.ಶ. ೧೯೦೦ರ ಆಗಸ್ಟ್ ೧೬ರಂದು ಗುದ್ದಲಿ ಪೂಜೆಯೊಂದಿಗೆ ಆರಂಭವಾಯಿತು. ಆಗಿನ ಕಾಲದಲ್ಲಿ ಮತ್ತೆ ಮತ್ತೆ ಕಾಣಿಸಿಕೊಳ್ಳುತ್ತಿದ್ದ ಕಾಲರಾ ಬೇನೆಯ ಕಾರಣದಿಂದಾಗಿ ಕೆಲವು ದಿನಗಳು ಕೆಲಸ ಸ್ಥಗಿತಗೊಳ್ಳುತ್ತಿದ್ದುದೂ ಸೇರಿದಂತೆ, ಸಂಬಂಧಿಸಿದ ಅಧಿಕಾರಿಗಳ ಹಾಗೂ ಸ್ಥಳೀಯ ಮತ್ತು ದೂರದ ಊರುಗಳಿಂದ ಬಂದ ಕೆಲಸಗಾರರ ೨೨-೨೩ ತಿಂಗಳ ಸತತವಾದ ಶ್ರಮದ ಫಲವಾಗಿ ೩೦ನೆಯ ಜೂನ್ ೧೯೦೨ ಅನ್ನು ಭಾರತದ ವಿದ್ಯುತ್ ಕ್ಷೇತ್ರದ ಚರಿತ್ರೆಯಲ್ಲಿ ಸುವರ್ಣಾಕ್ಷರಗಳಲ್ಲಿ ಬರೆದಿಡುವಂತಾಯಿತು. ಆ ಶುಭ ದಿನದಂದು, ಮೈಸೂರು ದರ್ಬಾರಿನಲ್ಲಿ ಬ್ರಿಟಿಷ್ ರೆಸಿಡೆಂಟರಾಗಿದ್ದ ಜನರಲ್ ಡೊನಲ್ಡ್ ರಾಬರ್ಟ್‌ಸನ್ನರು ತಮ್ಮ ಅಧಿಕಾರಿ ನಿಯೋಗದೊಂದಿಗೆ ಶಿವನ ಸುಮದ್ರಕ್ಕೆ ಭೇಟಿ ನೀಡಿ, ಅದರ ಪ್ರಾರಂಭೋತ್ಸವವನ್ನು ನೆರವೇರಿಸಿದರು. ಶ್ರೀಮತಿ ರಾಬರ್ಟ್‌ಸನ್ನರು ಕೆ.ಜಿ.ಎಫ್.ಗೆ ವಿದ್ಯುತ್ ಹರಿಸುವ ಗುಂಡಿಯನ್ನು ಒತ್ತುವುದರೊಂದಿಗೆ ಭಾರತದಲ್ಲಿ ವಿದ್ಯುತ್ ಪ್ರಸರಣದ ಮೊದಲ ಅಕ್ಷರವನ್ನು ದಾಖಲಿಸಿದರು. ಈ ದಿನದಂದು ಶಿವನಸಮುದ್ರ ವಿದ್ಯುದಾಗಾರವು ಭಾರತದ ಪ್ರಪ್ರಥಮ ಜಲ ವಿದ್ಯುದಾಗಾರ ಎಂಬ ಹೆಗ್ಗಳಿಕೆಗೆ ಪಾತ್ರವಾಯಿತು. ಅಲ್ಲದೆ ಈ ವಿದ್ಯುತ್ ಕೇಂದ್ರವು ಕ್ರಿ.ಶ. ೧೯೦೫ರ ಆಗಸ್ಟ್ ೫ರಂದು ಬೆಂಗಳೂರಿಗೂ, ಕ್ರಿ.ಶ. ೧೯೦೮ರ ಸೆಪ್ಟಂಬರ್ ೨೬ರಂದು ಮೈಸೂರಿಗೂ ಪ್ರಥಮವಾಗಿ ವಿದ್ಯುತ್ ಬೆಳಕನ್ನು ನೀಡಿತು ಎಂಬುದನ್ನು ನೆನೆದಾಗ ಸಂತೋಷವೆನಿಸುತ್ತದೆ.

ಕ್ರಿ.ಶ. ೨೦೦೨ರಲ್ಲಿ ಶತಮಾನವನ್ನು ಕಂಡ ಈ ಶಿವನಸಮುದ್ರ ವಿದ್ಯುತ್ ಯೋಜನೆಗೆ ಅಂಕಿತ ನೀಡಿದ ಮೈಸೂರು ಅರಸ ಚಾಮರಾಜ ಒಡೆಯರ್ ಅವರ ಧರ್ಮಪತ್ನಿ ಕೆಂಪನಂಜಮ್ಮಣ್ಣಿಯವರನ್ನೂ, ಈ ಮಂಜೂರಾತಿಗಾಗಿ ಗಮನಾರ್ಹ ಪಾತ್ರವಹಿಸಿ ಮುಂಚೂಣಿ ಯಲ್ಲಿದ್ದ ದಿವಾನ್ ಕೆ. ಶೇಷಾದ್ರಿ ಅಯ್ಯರ್ ಅವರನ್ನೂ ಹಾಗೂ ವಿದ್ಯುದಾಗಾರವನ್ನು ನಿರ್ಮಿಸುವಲ್ಲಿ ಆರಂಭದಿಂದ ಅಂತ್ಯದವರೆಗೆ ಬಂದೊದಗಿದ ಕಷ್ಟವನ್ನೆಲ್ಲಾ ಸಹಿಸಿಕೊಂಡು ಶ್ರಮಿಸಿದ ಎಲ್ಲಾ ಅಧಿಕಾರಿಗಳು ಮತ್ತು ಸಾವಿರಾರು ಜನ ಕಾರ್ಮಿಕರನ್ನೂ ಸ್ಮರಿಸಿಕೊಳ್ಳುವುದು ಎಲ್ಲರ ಆದ್ಯ ಕರ್ತವ್ಯವೆಂದು ಭಾವಿಸಬಹುದು.

ಶಿವನಸಮುದ್ರ ಗ್ರಾಮಕ್ಕೆ ಸೇರಿದ ಸ್ಥಳದಲ್ಲಿರುವ ಈ ಜಲ ವಿದ್ಯುದಾಗಾರಕ್ಕೆ ಬ್ಲಫ್ ಎಂದು ಕರೆಯಲಾಗಿದೆ. ಬ್ಲಫ್ ಎಂದರೆ ಕಡಿದಾದ ಕಣಿವೆ ಎಂಬ ಅರ್ಥವಿದೆ. ಈ ಜಾಗವು ಬೆಟ್ಟ ಗುಡ್ಡಗಳಿಂದ ಆವೃತವಾಗಿದ್ದು ಇವುಗಳ ನಡುವಣ ಆಳವಾದ ಜಾಗದಲ್ಲಿ ನಿರ್ಮಾಣಕಾರ್ಯ ನಡೆಯುತ್ತಿದ್ದುದರಿಂದ, ಆಗಿನ ಕಾಲದಲ್ಲಿ ಬ್ಲಫ್ ಎಂದು ಕರೆಯಲಾಗಿದ್ದು, ಈಗಲೂ ಅದೇ ಹೆಸರು ಉಳಿದುಬಂದಿದೆ. ಸ್ಥಳೀಯ ಹಾಗೂ ಸುತ್ತಮುತ್ತಲಿನ ಜನರಿಗೆ ಶಿವನಸಮುದ್ರ ಎಂದರೆ ಗ್ರಾಮವೆಂದೇ ತಿಳಿಯುತ್ತಾರೆ. ಬ್ಲಫ್ ಎಂದರೆ ವಿದ್ಯುತ್ ಕೇಂದ್ರದ ಸ್ಥಳವೆಂದು ಗುರುತಿಸುತ್ತಾರೆ.

ಶಿವನಸಮುದ್ರವು ಕಾವೇರಿ ನದಿಯ ದ್ವೀಪದಲ್ಲಿರುವ ಒಂದು ಸಣ್ಣ ಗ್ರಾಮ. ಈ ಗ್ರಾಮದಲ್ಲಿರುವ ಸೋಮೇಶ್ವರ ದೇವಾಲಯದಲ್ಲಿನ ಗರ್ಭಗೃಹದ ಕುಮುದದ ಮೇಲೆ ಮತ್ತು ಅಧಿಷ್ಠಾನಕ್ಕೆ ಸೇರಿರುವ ಕಲ್ಲಿನ ಮೇಲಿರುವ ತಮಿಳು ಮತ್ತು ಗ್ರಂಥ ಲಿಪಿಯು, ಕ್ರಿ.ಶ. ೧೨ನೆಯ ಶತಮಾನದ ಎರಡು ಶಾಸನಗಳಲ್ಲಿ, ಒಂದು ಶಾಸನವು ಈ ಸ್ಥಳದಲ್ಲಿ ಉಲಗಾಮುಣ್ಡೀಶ್ವರ, ತಿಲ್ಲೈಯಾಳೀಶ್ವರ ಮತ್ತು ತಿಲ್ಲೈಕ್ಕೂತ್ತವಿಟಜಿರ್ ದೇವರುಗಳನ್ನು ಪ್ರತಿಷ್ಠಾಪಿಸಿ ದೇವಾಲಯಗಳನ್ನು ಕಟ್ಟಲಾಯಿತೆಂದೂ, ಮತ್ತೊಂದು ಶಾಸನವು ಮುಡಿಗೊಂಡಶೋಳಪುರಂ ಉರುಫ್ ದೇಶೀ ಉಯ್ಯಕೊಂಡಶೋಳಪಟ್ಟಣಂನಲ್ಲಿರುವ ಉಲಗಾಮುಣ್ಡೀಶ್ವರ ದೇವರ ನಂದಾದೀಪಕ್ಕಾಗಿ ೩ ಹೊನ್ನು ದಾನವಾಗಿ ನೀಡಿರುವುದನ್ನು ತಿಳಿಸುತ್ತದೆ. ಈ ಶಾಸನಗಳ ದಾಖಲೆಯಂತೆ ೮೦೦ ವರ್ಷಗಳ ಹಿಂದೆಯೂ ಈ ಗ್ರಾಮವು ಅಸ್ತಿತ್ವದಲ್ಲಿತ್ತು ಎಂದೂ ಈ ಗ್ರಾಮಕ್ಕೆ ಮುಡಿಗೊಂಡಶೋಳಪುರಂ ಉರುಫ್ ದೇಶೀ ಉಯ್ಯಕೊಂಡಶೋಳಪಟ್ಟಣ ಎಂಬ ನಾಮಧೇಯವಿತ್ತು ಎಂದೂ ತಿಳಿದುಬರುತ್ತದೆ.

ಪ್ರಾಚೀನ ಕಾಲದಲ್ಲಿ ರಾಜರು, ಅಧಿಕಾರಿಗಳು ಮುಂತಾದವರು ತಮ್ಮ ಅಥವಾ ತಮ್ಮ ವಂಶಜರ ಹೆಸರಿನಲ್ಲಿ ಕೆರೆಯನ್ನು ಕಟ್ಟಿಸಿದಾಗ ತಮ್ಮ ಅಥವಾ ತಮ್ಮ ವಂಶಜರ ಹೆಸರಿನ ಮುಂದೆ ಸಮುದ್ರ ಎಂದು ಸೇರಿಸಿ ಕೆರೆಯನ್ನು ಆ ಹೆಸರಿನಲ್ಲಿ ಕರೆದಿರುವುದು ಮತ್ತು ಕೆರೆಯ ಹೆಸರಿನಲ್ಲಿಯೇ ಅಲ್ಲಿನ ಗ್ರಾಮವನ್ನೂ ಕರೆದಿರುವುದು ಶಾಸನಗಳಿಂದ ತಿಳಿದುಬರುತ್ತದೆ. ಅಂತೆಯೇ ಈ ಸ್ಥಳದಲ್ಲಿ ಈಶ್ವರನ ದೇವಾಲಯವೂ ಇರುವುದಲ್ಲದೆ ಈ ಗ್ರಾಮಕ್ಕೆ ಸೇರಿದಂತೆ ಒಂದು ಕೆರೆಯೂ ಇದೆ. ಬಹುಶಃ ಈ ಕೆರೆಯು ಯಾವುದಾದರೂ ಅರಸನಿಂದಲೋ ಅಥವಾ ಅಧಿಕಾರಿಯಿಂದಲೊ ನಿರ್ಮಾಣಗೊಂಡು ಒಂದು ಕಾಲದಲ್ಲಿ ದೇವಾಲಯಕ್ಕೆ ಸೇರಿದ್ದಾಗಿದ್ದು, ಕಾಲಾನಂತರ ಈಶ್ವರನು ಜನರ ಬಾಯಲ್ಲಿ ಶಿವನಾಗಿ, ಕೆರೆ ಸಮುದ್ರವಾಗಿ

ಶಿವನೊಂದಿಗೆ ಸಮುದ್ರವು ಸೇರಿ, ಈ ಸ್ಥಳವು ಶಿವನಸಮುದ್ರ ಎಂಬ ಹೆಸರನ್ನು ಪಡೆದಿರಬಹುದು. ಹೆಸರು ಯಾವ ಕಾಲದಲ್ಲಿ ಬದಲಾವಣೆಗೊಂಡಿತು ಎಂಬುದಕ್ಕೆ ಶಾಸನಗಳಲ್ಲಿ ಯಾವುದೇ ದಾಖಲೆ ದೊರೆತಿಲ್ಲ. ಆದರೆ ಹದಿನಾಡ ಸೀಮೆಯ ಶಿವನ ಸಮುದ್ರ ಸ್ಥಳ ಎಂಬ ಉಲ್ಲೇಖವು ಕೊಳ್ಳೇಗಾಲದ ಕ್ರಿ.ಶ. ೧೫೫೯ ಮತ್ತು ಶಿವನಸಮುದ್ರದ ಕ್ರಿ.ಶ. ೧೬೦೪ರ ಶಾಸನಗಳಲ್ಲಿ ದಾಖಲಾಗಿದೆ.

ಈಗ ಶಿವನಸಮುದ್ರ ಎಂದೊಡನೆ ನಮ್ಮ ನೆನಪಿನಾಳದಿಂದ ಕಣ್ಣುಗಳ ಮುಂದೆ ಕಾಣಿಸುವ ಚಿತ್ರ ಪ್ರಕೃತಿಯೊಂದಿಗೆ ಸರಸವಾಡುತ್ತ ಧುಮ್ಮಿಕ್ಕುವ ಗಗನಚುಕ್ಕಿ ಮತ್ತು ಭರದಿಂದ ಸಾಗುವ ಭರಚುಕ್ಕಿ ಜಲಪಾತಗಳು. ಈ ಜಲಪಾತಗಳ ಸೃಷ್ಟಿಗೆ ಕಾರಣ ದಕ್ಷಿಣ ಗಂಗೆ ಎಂದೇ ಪ್ರಸಿದ್ಧವಾಗಿರುವ ಕಾವೇರಿ ನದಿ. ಈ ಸಂದರ್ಭದಲ್ಲಿ ನಯನ ಮನೋಹರವಾಗಿ, ಮನಸ್ಸಿನ ಉಲ್ಲಾಸವನ್ನು ಚಿಮ್ಮಿಸುವಂತೆ ಧುಮುಕುತ್ತ ಇಲ್ಲಿನ ಪ್ರಕೃತಿ ಸೌಂದರ್ಯವನ್ನು ಸವಿಯುವಲ್ಲಿ ಪ್ರಧಾನ ಪಾತ್ರ ವಹಿಸಿರುವ ಈ ಕಾವೇರಿಯ ಬಗೆಗೆ ಒಂದು ಸಿಂಹಾವಲೋಕನವು ಅಗತ್ಯವೆನಿಸುತ್ತದೆ.

ಪ್ರಕೃತಿಯ ಚೆಲುವು ಸೂರೆಯಾಗಿರುವ ಪಶ್ಚಿಮ ಘಟ್ಟಗಳ ಸಾಲು, ನಿತ್ಯ ಹರಿದ್ವರ್ಣದ ವೃಕ್ಷ ರಾಶಿಯಿಂದ, ಸಹ್ಯಾದ್ರಿಯ ಮಡಿಲಲ್ಲಿ ರಾರಾಜಿಸುವ ಪರ್ವತ ಶ್ರೇಣಿಗಳಿಂದ ಕೂಡಿದ ಕೊಡಗು ಕಾವೇರಿಯ ತವರು.

ದಕ್ಷಿಣ ಭಾರತದ ನದಿಗಳು ಉತ್ತರ ಭಾರತದ ನದಿಗಳಿಗಿಂತ ಪ್ರಾಚೀನ ಎಂಬ ಭೂವೈಜ್ಞಾನಿಕ ಹಿನ್ನೆಲೆಯಲ್ಲಿ ಕಾವೇರಿ, ಗಂಗೆಗಿಂತ ಹೆಚ್ಚು ಪ್ರಾಚೀನ ಎನ್ನಬೇಕು. ಇದಕ್ಕೆ ಸ್ಕಾಂದಪುರಾಣದ ಕತೆಯೂ ಪೌರಾಣಿಕ ಸಾಕ್ಷಿಯನ್ನು ಒದಗಿಸುತ್ತದೆ.

ತ್ರಿಗುಣಿ ಎಂಬ ಬ್ರಾಹ್ಮಣನಿಗೆ – 'ಕಾವೇರಿ ಪವಿತ್ರಳು, ದಿವ್ಯಳು, ಅವಳ ದರ್ಶನದಿಂದ ಪಾಪ ಪರಿಹಾರವಾಗುತ್ತದೆ, ಅವಳಲ್ಲಿ ಮಿಂದು ಬಾ' ಎಂದು ಕಾವೇರಿಯ ಬಗ್ಗೆ ಗಂಗೆಯು ಹೇಳುತ್ತಾಳೆ.

ಯಮುನೆಯು ಗಂಗೆಯ ಬಳಿಗೆ ಬಂದು – ಆಕೆಯ ಒದ್ದೆಯಾದ ವಸ್ತ್ರ ಮತ್ತು ಕೂದಲನ್ನು ಕಂಡು, 'ಏಕೆ ನೆನೆದಿರುವೆ?' ಎಂದು ಕೇಳಲಾಗಿ –

'ಸರಿದ್ಭಿರಹ ಮಾರ್ಮಾಯಾಃಕಾವೇರ್ಯಾಸ್ತೀರ್ಥ ಮಾದರಾತ್

ದೃಷ್ಟ್ವಾ ಪುಣ್ಯಾಂಭಸಿ ಸ್ನಾತ್ವಾಪುನರತ್ರಾಗತಾವಯಮ್' ಎನ್ನುತ್ತಾಳೆ. ಅಂದರೆ,

'ಶ್ರೇಷ್ಠವಾದ ಕಾವೇರಿ ತೀರ್ಥವನ್ನು ನದಿಗಳೊಡನೆ ದರ್ಶನ ಮಾಡಿ ಪವಿತ್ರವಾದ ಆ ಕಾವೇರಿಯಲ್ಲಿ ಮಿಂದು ಪುನಃ ಇಲ್ಲಿಗೆ ಎಲ್ಲರೂ ಬಂದೆವು. ಆದ ಕಾರಣ ವಸ್ತ್ರ ಮತ್ತು ಕೂದಲು ಒದ್ದೆ ಆಗಿವೆ' ಎಂದು ಗಂಗೆ ನುಡಿದಳಂತೆ.

ಅಗ್ನಿಪುರಾಣದ ಪ್ರಕಾರ ಕವೇರ ಎನ್ನುವ ಋಷಿಯು ಸಂತಾನ ಪ್ರಾಪ್ತಿಗಾಗಿ ತಪಸ್ಸು ಮಾಡಿದಾಗ, ಬ್ರಹ್ಮನು ಅವನ ತಪಸ್ಸಿಗೆ ಮೆಚ್ಚಿ ತನ್ನ ಸಾಕುಮಗಳಾದ ಲೋಪಾಮುದ್ರೆಯನ್ನು

ಅವನಿಗೆ ನೀಡುತ್ತಾನೆ. ಕವೇರ ಮುನಿಯ ಮಗಳು ಕಾವೇರಿ ಅಗುತ್ತಾಳೆ. ಬ್ರಹ್ಮಗಿರಿಯಲ್ಲಿ ತಪಸ್ಸು ಮಾಡುತ್ತಿದ್ದ ಅಗಸ್ತ್ಯ ಮುನಿಯ ದೃಷ್ಟಿಗೆ ಬಿದ್ದ ಈ ಚೆಲುವೆಯನ್ನು ಕಂಡು ಮೋಹಿತ ನಾಗುತ್ತಾನೆ. ಅಗಸ್ತ್ಯನೊಡನೆ ಇಷ್ಟವಿಲ್ಲದ ವಿವಾಹ ಮಾಡಿಕೊಂಡ ಕಾವೇರಿಯು ತನ್ನನ್ನು ಬಿಟ್ಟು ಎಂಥ ಸಮಯದಲ್ಲಿಯೂ ಆಚೆ ಈಚೆ ಹೋಗಕೂಡದು ಎಂಬ ನಿರ್ಬಂಧ ಹಾಕುತ್ತಾಳೆ. ಒಂದು ದಿನ ಅಗಸ್ತ್ಯನು ಕಾವೇರಿಯನ್ನು ಜಲರೂಪ ಮಾಡಿ ತನ್ನ ಕಮಂಡಲುವಿನಲ್ಲಿ ಹಾಕಿ ನದಿಗೆ ಸ್ನಾನಕ್ಕೆ ಹೋದಾಗ, ಪತಿ ತನ್ನ ಮಾತಿಗೆ ತಪ್ಪಿದನೆಂದು ಕಮಂಡಲುವಿನಿಂದ ಹೊರಕ್ಕೆ ಧುಮಿಕಿದ ಕಾವೇರಿಯು ನದಿಯಾಗಿ ಹರಿಯತೊಡಗಿದಳು. ಈ ಕತೆಯು ಸಾಂಕೇತಿಕವಾಗಿ ಕಾವೇರಿಯ ಚಿಮ್ಮುವಿಕೆ ಹಾಗೂ ಕೊಡಗಿನಿಂದ ರಭಸವಾಗಿ ಹರಿದು ಬರುವ ಸಂಗತಿಯನ್ನು ಸೂಚಿಸುವಂತಿದೆ.

ಕಾವೇರಿಯು ದೊಡ್ಡದು, ಸಣ್ಣದು ಹಾಗೂ ಮತ್ತೂ ಸಣ್ಣವೂ ಸೇರಿದಂತೆ ೨೧ ಉಪನದಿಗಳನ್ನು ಹೊಂದಿದೆ. ಅವುಗಳಲ್ಲಿ ಮುಖ್ಯವಾದುವು ಕಬಿನಿ, ಹೇಮಾವತಿ, ಸುವರ್ಣಾವತಿ, ಲಕ್ಷ್ಮಣತೀರ್ಥ, ಲೋಕಪಾವನಿ ಇತ್ಯಾದಿ.

ಕನ್ನಡದ ಮೊದಲ ಅಲಂಕಾರ ಗ್ರಂಥವಾದ ಕವಿರಾಜ ಮಾರ್ಗದಲ್ಲಿ,

'ಕಾವೇರಿಯೆಂದಮಾ ಗೋ
ದಾವರಿ ವರಮಿರ್ದ ನಾಡದಾ ಕನ್ನಡದೊಳ್
ಭಾವಿಸಿದ ಜನಪದಂ ವಸು
ಧಾವಲಯ ವಿಲೀನ ವಿಶದ ವಿಷಯ ವಿಶೇಷಂ

ಕನ್ನಡ ನಾಡಿನ ವಿಸ್ತಾರವನ್ನು ತಿಳಿಸುವಾಗ 'ಕಾವೇರಿಯಿಂದಮಾ ಗೋದಾವರಿಯವರೆಗೆ' ಎಂದು ಈ ನದಿಯನ್ನು ಮೇರೆಯಾಗಿಟ್ಟುಕೊಂಡಿದ್ದಾನೆ ಕವಿ.

ಕಾವೇರಿಯು ತಲಕಾವೇರಿಯಿಂದ ಚಿಮ್ಮುತ್ತ ಕೊಡಗು ಬಿಟ್ಟನಂತರ ಹಾಸನ ಜಿಲ್ಲೆಯ ಮೂಲಕ ಮೈಸೂರು ಜಿಲ್ಲೆಯ ಚುಂಚನಕಟ್ಟೆಯಲ್ಲಿ ಜಲಪಾತವನ್ನು ಸೃಷ್ಟಿಸಿ ಕೃಷ್ಣರಾಜನಗರದ ಮುಖಾಂತರ ಕೃಷ್ಣರಾಜಸಾಗರವನ್ನು ಪ್ರವೇಶಿಸುತ್ತದೆ. ನಂತರ ರಂಗನತಿಟ್ಟನ್ನು ದಾಟಿ, ಶ್ರೀರಂಗಪಟ್ಟಣ ದ್ವೀಪವನ್ನು ಬಳಸಿ ಮೈಸೂರು ಜಿಲ್ಲೆಯತ್ತ ಸಾಗಿ ಆಗ್ನೇಯ ಅಂಚಿನಲ್ಲಿ ಮಳವಳ್ಳಿ ಮತ್ತು ಕೊಳ್ಳೇಗಾಲ ತಾಲ್ಲೂಕುಗಳ ಗಡಿಯಾಗಿ ಹರಿಯುತ್ತದೆ.

ಇದರ ಉಪನದಿಯಾದ ಹೇಮಾವತಿಯು ಚಿಕ್ಕಮಗಳೂರು ಜಿಲ್ಲೆಯ ಮೂಡಿಗೆರೆಯ ತಾಲ್ಲೂಕಿನಲ್ಲಿ ಹುಟ್ಟಿ ಹಾಸನ ಜಿಲ್ಲೆಯ ಮೂಲಕ ಹರಿದು ಮಂಡ್ಯ ಜಿಲ್ಲೆಯ ಕೆ.ಆರ್. ಪೇಟೆ ತಾಲ್ಲೂಕಿನ ಕಿಕ್ಕೇರಿ ಹೋಬಳಿಯ ಗುಡ್ಡೆಹೊಸಳ್ಳಿ ಬಳಿ ಕಾವೇರಿಯನ್ನು ಸೇರುತ್ತದೆ. ಲೋಕಪಾವನಿಯು ನಾಗಮಂಗಲ ತಾಲ್ಲೂಕಿನ ಹೊನಕೆರೆ ಹೋಬಳಿ ಸಾತೇನಹಳ್ಳಿ ಬೆಟ್ಟದ ಜೌಗು ಭೂಮಿಯಲ್ಲಿ ಹುಟ್ಟಿ ಪಾಂಡವಪುರ ಪೂರ್ವದಲ್ಲಿ ದಕ್ಷಿಣಾಭಿಮುಖವಾಗಿ ಹರಿಯುವಾಗ ಹಲವಾರು ಸಣ್ಣಪುಟ್ಟ ತೊರೆಗಳನ್ನು ಕೂಡಿಸಿಕೊಂಡು ಶ್ರೀರಂಗಪಟ್ಟಣ ತಾಲ್ಲೂಕಿನ ಕರಿಘಟ್ಟ ತಪ್ಪಲಲ್ಲಿ ಕಾವೇರಿ ನದಿಯನ್ನು ಸೇರುತ್ತದೆ.

ಮೈಸೂರು ಜಿಲ್ಲೆಯ ಆಗ್ನೇಯ ಅಂಚಿನಲ್ಲಿ ಸಾಗುತ್ತ ಶ್ರೀರಂಗಪಟ್ಟಣವನ್ನು ಒಂದು

ವಿಶಿಷ್ಟ ದ್ವೀಪವನ್ನಾಗಿ ಮಾಡಿ, ತಾನೇ ಸೃಷ್ಟಿಸಿಕೊಂಡ ಸಂಗಮದ ಮೂಲಕ ಹರಿಯುವ ಕಾವೇರಿ ನದಿಯು ಮಂಡ್ಯ ಜಿಲ್ಲೆಯ ಮಳವಳ್ಳಿ ತಾಲ್ಲೂಕಿನ ಮಲ್ಲಿಕ್ಯಾತನಹಳ್ಳಿಯ ಬಳಿ ಕರ್ನಾಟಕ ಪ್ರಸ್ಥಭೂಮಿಯಿಂದ ತಮಿಳುನಾಡು ಮೈದಾನ ಪ್ರದೇಶಕ್ಕೆ ಪ್ರವೇಶಿಸುವಾಗ ಎರಡು ಕವಲುಗಳಾಗಿ ಸೃಷ್ಟಿಸುವ ದ್ವೀಪ ಎಡನೆಯ ಬೃಹತ್ ದ್ವೀಪ. ಕಾವೇರಿಯು ಮೂರನೆಯ ದ್ವೀಪವನ್ನು ಶ್ರೀರಂಗದಲ್ಲಿ ನಿರ್ಮಿಸಿದೆ. ಶಿವನಸಮುದ್ರದ ದ್ವೀಪವನ್ನು ಹೆಗ್ಗೂರು ಎಂಬುದಾಗಿ ಕರೆಯಲಾಗುತ್ತಿತ್ತು ಎಂದು ತಿಳಿದುಬರುತ್ತದೆ. ಈ ಸ್ಥಳದಲ್ಲಿ ಸುಮಾರು ೩೩೦ ಅಡಿ ಎತ್ತರದಿಂದ ಧುಮುಕುವ ಪಶ್ಚಿಮ ಜಲಧಾರೆಗೆ ಗಗನಚುಕ್ಕಿ ಎಂದೂ, ಅಲ್ಲಿಂದ ಸುಮಾರು ಒಂದೂವರೆ ಕಿ.ಮೀ. ದೂರದಲ್ಲಿನ ಪೂರ್ವದ ಜಲಧಾರೆಗೆ ಭರಚುಕ್ಕಿ ಎಂದೂ ಕರೆಯಲಾಗಿದೆ. ಕ್ರಿ.ಶ. ೧೯೦೦ರಲ್ಲಿ ಶ್ರೀ ಕೆ. ಶೇಷಾದ್ರಿ ಅಯ್ಯರ್ ಅವರು ಮೈಸೂರಿನ ದಿವಾನರಾಗಿದ್ದ ಸಂದರ್ಭದಲ್ಲಿ ಈ ಎರಡೂ ಜಲಧಾರೆಗಳನ್ನು ಮೇಲಿನ ಹೆಸರುಗಳನ್ನು ಕರೆಯಲಾಗಿದೆ.

ನದಿಯ ಪಾವಿತ್ರತೆಯನ್ನು ಜನಸಾಮಾನ್ಯರು ಉಳಿಸಿಕೊಂಡು ಬರಲು ದೇವಸ್ಥಾನಗಳ ನಿರ್ಮಾಣ ಸಹಾಯಕ ಹಾಗೂ ಪೋಷಕ. ಇದು ಸ್ಥಳದ ವೈಶಿಷ್ಟ್ಯತೆ ಹಾಗೂ ಪ್ರಕೃತಿ ಸೌಂದರ್ಯವನ್ನೂ ಹೆಚ್ಚಿಸುತ್ತದೆ. ಕಾವೇರಿ ನದಿ ತೀರದ ಉದ್ದಕ್ಕೂ ಶ್ರೀರಂಗಪಟ್ಟಣದ ರಂಗನಾಥ ದೇವಾಲಯ, ತಲಕಾಡು ವೈದ್ಯನಾಥೇಶ್ವರ, ಕೀರ್ತಿನಾರಾಯಣ ದೇವಾಲಯಗಳು, ಶಿವನ ಸಮುದ್ರದ ಜಗನ್ಮೋಹನ ರಂಗನಾಥ, ಶ್ರೀರಂಗದಲ್ಲಿನ ರಂಗನಾಥ ದೇವಾಲಯ ಇತ್ಯಾದಿ ಒಂದಿಲ್ಲೊಂದು ದೇವಾಲಯಗಳನ್ನು ನಾವು ಕಾಣಬಹುದು. ಕಾವೇರಿಯು ಸೃಷ್ಟಿಸಿರುವ ಮೂರು ದ್ವೀಪಗಳಲ್ಲಿಯೂ ಶ್ರೀರಂಗನಾಥನ ದೇವಾಲಯಗಳಿವೆ. ಶ್ರೀರಂಗಪಟ್ಟಣದ ರಂಗನಾಥನು ಆದಿರಂಗ ಎಂತಲೂ, ಶಿವನಸಮುದ್ರದ ರಂಗನಾಥನು ಮಧ್ಯರಂಗ ಎಂತಲೂ, ಶ್ರೀರಂಗದ ರಂಗನಾಥನು ಅಂತ್ಯರಂಗ ಎಂತಲೂ ಪ್ರಸಿದ್ಧಿ ಪಡೆದಿದ್ದಾರೆ.

ಮರ, ಗಿಡ, ಗಿರಿ ಕಂದರಗಳು, ಪ್ರಾಣಿಗಳು, ದೇವಾಲಯಗಳು, ಕೆರೆ, ಕುಂಟೆಗಳು, ಹೊಲ ಗದ್ದೆಗಳು ಹೀಗೆ ಆಯಾ ಪರಿಸರದಲ್ಲಿರುವ ಯಾವುದೇ ವಸ್ತುವಾದರೂ ನಿಸರ್ಗ ಸೌಂದರ್ಯಕ್ಕೆ ಹಿನ್ನೆಲೆಯಾಗಬಹುದು.

ಕಾವೇರಿ ನದಿಯು ಇಬ್ಭಾಗವಾಗಿ ಸೃಷ್ಟಿಸಿರುವ ಶಿವನಸಮುದ್ರದ ದ್ವೀಪದ ದಕ್ಷಿಣ ಕಾವೇರಿಗೆ ಅಡ್ಡವಾಗಿ ಕಟ್ಟಿದ ಕೊಳ್ಳೇಗಾಲ ಸೇತುವೆಯು ಅಂದಿನ ಮದ್ರಾಸು ಪ್ರಾಂತ್ಯಕ್ಕೆ ಸಂಪರ್ಕ ನೀಡುತ್ತಿದ್ದರೆ, ಉತ್ತರ ಕಾವೇರಿಗೆ ಕಟ್ಟಿದ ಶಿವನಸಮುದ್ರ ಸೇತುವೆಯ ಮೇಲೆ ನಿಂತು ಸುತ್ತಲೂ ಒಮ್ಮೆ ಕಣ್ಣು ಹಾಯಿಸಿದರೆ ಸಿಕ್ಕುವ ನೋಟ ಆಹ್ಲಾದಕರ. ಈ ಸ್ಥಳಕ್ಕೆ ಸಂಬಂಧಿಸಿದಂತೆ ಕೆಳಕಂಡ ಎರಡು ಶಾಸನಗಳು ದಾಖಲೆಗಳಾಗಿ ಸಿಗುತ್ತವೆ.

ಮಾರಮ್ಮನ ಗುಡಿ ಬಳಿ ಇರುವ ಕ್ರಿ.ಶ. ೧೮೨೧ರ ಶಾಸನ

೧) .........ದ್ರಕ್ಕೆ ಹೋಗುವ ಬಾಟಾ ಮಾರ್ಗದ......
೨) ಗಾಯನ ಬೆಟ್ಟಕ್ಕೆ ಉತ್ತರ ಕಾವೇರಿ ನದಿ (ಗೆ)
೩) .ಗಿನ ಹಳಕೆ ಪಶ್ಚಿಮ ಯಿ ಮಧ್ಯದ
೪) .ಭೂಮಿಯಲ್ಲಿ ಭಹಳ ಗಿಡಗಳು

೫)    ಹಾಉಗಳು ಶೇರಿಕೊಂಡು ಜನಗಳಿಗೆ ಜಿ.
೬)    ...ಬಹಳ ಉಪದ್ರವಾಗಿಉ
೭)    .ಥಾ ಯಿ ಬಗೆ ಅಡವಿಭೂಮಿ ಯೆಂ.
೮)    ...ಸಮುದ್ರದ ದರಖಾಸ್ತುದಾರರು ರಾ.
೯)    ..ಮೊದಲಿಯಾರಿಗೆ ಕೊಟು ಯಿಧೇ (ಶಾ)
೧೦)    ..ಹನಶಕ ೧೭೪೩ನೆ ವಿಷುನಾ
೧೧)    ...ಆ(ಶ್ವಿ)ಜ ಶು ೧೦ಲ್ಲೂ.

ಈ ಶಾಸನದ ಪ್ರಕಾರ ಬಾಟಾಮಾರ್ಗ (ಕಾಡುದಾರಿ) ಪ್ರದೇಶದಲ್ಲಿ ಗಿಡಮರಗಳು ಮತ್ತು ಹಾವುಗಳು ಹೆಚ್ಚು ಇದ್ದು ಜನಗಳಿಗೆ ಅಪಾಯಕರವಾಗಿದ್ದುದರಿಂದ ದರಖಾಸ್ತುದಾರರಾಗಿದ್ದ ಮೊದಲಿಯಾರ್ ಅವರಿಗೆ ಕೊಡಲಾಗಿದೆ ಎಂದು ತಿಳಿಸುತ್ತದೆ.

ಇಲ್ಲಿ ಧರಖಾಸ್ತುದಾರನಾಗಿ ಕಾಣಬರುವ ಮೊದಲಿಯಾರನು ಶಿವನಸಮುದ್ರ, ಸತ್ಯಗಾಲ ಮತ್ತು ಬೆಳಕವಾಡಿಗಳ ಜಹಗೀರ್‌ದಾರನೂ, ಮುಳ್ಳೂರು ಮತ್ತು ಉಘ್ನೈ ಗ್ರಾಮಗಳ ಶ್ರೋತಿಯಂದಾರನೂ ಆದ ಟಿ. ರಾಮಸ್ವಾಮಿ ಮುದಲಿಯಾರ್ ಎಂಬುದಾಗಿ ಶಿವನಸಮುದ್ರದ ಕೆಳಕಂಡ ಕ್ರಿ.ಶ. ೧೮೩೨ರ ಇಂಗ್ಲಿಷ್ ಶಾಸನದಿಂದ ತಿಳಿಯುತ್ತದೆ. ಬಹುಶಃ ಈತನು ಇಲ್ಲಿನ ಕಾಡನ್ನೆಲ್ಲಾ ಕಡಿಸಿ ಸಾಗುವಳಿಗೆ ಯೋಗ್ಯವಾದಂಥ ಭೂಮಿಯನ್ನಾಗಿ ಮಾಡಿ, ಕೆಲ ಕಾಲಾನಂತರ ಒಂದು ಸೇತುವೆಯನ್ನು ಕಟ್ಟಿಸಿರುವುದು ತಿಳಿಯುತ್ತದೆ. ಆ ಇಂಗ್ಲಿಷ್ ಶಾಸನ ಇಂತಿದೆ.

The Lushington Bridge
dedicated to
The Rt. H.E. Honorable Stephen Rumbold Lushington
Governor of Fort Saint George
by
Triplicany Ramaswamy Moodeliar
Jaghirdar of Seevasamoodrum Sathgal and Belikwaudy
and
Shortriumdar of Mooloor and Oghanah
as a public testimony of his personal gratitude
and
as a lasting monument of the benefits
conferred on the Public and Commerce
of the Country
Begum February 1830
Finished and surveyed by Lieftenant Colonel Maclean
Augutst 1832
by under the care of
T. Ramaswamy Moodeliar.

ಈ ಶಾಸನದಂತೆ ಉತ್ತರ ಕಾವೇರಿಯ (ಶಿವನಸಮುದ್ರ) ಸೇತುವೆಯನ್ನು ಕ್ರಿ.ಶ. ೧೮೩೦ರಲ್ಲಿ ಆರಂಭ ಮಾಡಿ ಎರಡು ವರ್ಷಗಳಲ್ಲಿ ನಿರ್ಮಾಣಕಾರ್ಯ ಮುಗಿಸಿ ಕ್ರಿ.ಶ. ೧೮೩೨ರಲ್ಲಿ

ಪ್ರಜೆಗಳ ಉಪಯೋಗಕ್ಕೋಸ್ಕರ ತೆರೆಯಲಾಯಿತು. ಲುಷಿಂಗ್‌ಟನ್ ಸೇತುವೆ ಎಂದು ಕರೆಯಲ್ಪಡುತ್ತಿದ್ದ ಈ ಸೇತುವೆಯು ನಿರ್ಮಾಣಗೊಂಡ ೯೨ನೆಯ ವರ್ಷದಲ್ಲಿ ಅಂದರೆ ೧೯೨೪ನೆಯ ಜುಲೈ ತಿಂಗಳಿನಲ್ಲಿ ಕಾವೇರಿಯ ತುಂಬು ಪ್ರವಾಹದಿಂದ ಕೊಚ್ಚಿ ಹೋಗಿ ಐತಿಹಾಸಿಕ ಕುರುಹಾಗಿ ಸ್ವಲ್ಪ ಭಾಗ ಮಾತ್ರ ತನ್ನ ಅಸ್ತಿತ್ವವನ್ನು ತೋರುತ್ತಿದೆ.

ಐತಿಹಾಸಿಕ ಕುರುಹಾಗಿ ಉಳಿದಿರುವ ಸೇತುವೆಯನ್ನು ಮಂಟಪದ ಮಾದರಿಯಲ್ಲಿ ನಿರ್ಮಾಣ ಮಾಡಿರುವುದರಿಂದ, ಇದನ್ನು ದೂರದಿಂದ ನೋಡಿದಾಗ ಸಾಲು ಮಂಟಪಗಳಂತೆ ಕಾಣುತ್ತದೆ. ಇದರ ಮೇಲೆ ನಿಂತು ಸುತ್ತಲೂ ಕಣ್ಣು ಹಾಯಿಸಿದಾಗ ಕಾಣುವ ಹಸಿರು ಗಿಡ ಮರಗಳಿಂದ ರಾರಾಜಿಸುವ ಬೆಟ್ಟ, ಗುಡ್ಡಗಳು, ಭೂಮಿಗೆ ಹಸಿರು ಹಾಸನ್ನು ಹೊದಿಸಿದಂತೆ ಕಂಡುಬರುವ ಭತ್ತದ ಗದ್ದೆಗಳು ನಮ್ಮ ಕಣ್ಣಿಗೆ ಹಬ್ಬವನ್ನುಂಟು ಮಾಡುತ್ತದೆ.

ಮುಂಗಾರಿನ ಮಳೆಯ ಸಂಭ್ರಮದಲ್ಲಿ ವಿದ್ಯುತ್ ಕೇಂದ್ರದ ಹಿಂಭಾಗದಲ್ಲಿ ಮೂರು ದಿಕ್ಕುಗಳಲ್ಲಿನ ಬೆಟ್ಟಗಳಲ್ಲಿ ಕಾಣುವ ಹಸಿರಿನ ಮಧ್ಯೆ ಕಾವೇರಿಯು ಮೈದುಂಬಿ ಭೋರ್ಗರೆಯುತ್ತ ಕಣಿವೆಯಲ್ಲಿ ಹರಿಯುವಾಗ ನೋಡಿದಷ್ಟೂ ನೋಡಬೇಕೆನ್ನುವ ಆಸೆ ಹಿಂಗುವುದೇ ಇಲ್ಲ. ಹಿನ್ನೆಲೆಯಲ್ಲಿನ ಹಸಿರು ವನರಾಶಿಯಿಂದ ತುಂಬಿ ತುಳುಕಾಡುವ ಏರು ತಗ್ಗಿನ ಬೆಟ್ಟದ ಸಾಲುಗಳ ಮುಂಭಾಗ ಹಾಗೂ ಅಕ್ಕ ಪಕ್ಕದ ಸಮತಟ್ಟಾದ ಪ್ರದೇಶದಲ್ಲಿ ಕುರುಚಲು ಮತ್ತು ಮಧ್ಯಮ ಎತ್ತರದ ಗಿಡ ಮರಗಳ ಮಧ್ಯದಲ್ಲಿ ಸುಮಾರು ೩೩೦ ಅಡಿಗಳ ಎತ್ತರದಿಂದ ಧುಮುಕುವ ಗಗನಚುಕ್ಕಿ ಜಲಪಾತವನ್ನು ವರ್ಣಿಸಲಸದಳ. ಮುಂಜಾನೆಯ ನೀಲಿಯಾಕಾಶದಲ್ಲಿ ಮೋಡಗಳ ಮರೆಯಿಂದ ಹೊರಸೂಸುವ ಸೂರ್ಯನ ಹೊಂಬಣ್ಣದ ಕಿರಣಗಳು, ವಿಧ ವಿಧವಾದ ಹಕ್ಕಿಗಳಿಂಚರ, ಮೆಲ್ಲಗೆ ಮೈ ನಡುಗಿಸುವ ತಂಗಾಳಿಯೊಂದಿಗೆ, ನಿಸರ್ಗದ ಹಸಿರಿನ ವನಸಿರಿಯ ಮಧ್ಯೆ ಜಲಪಾತವನ್ನು ಆಸ್ವಾದಿಸುವಾಗ, ಜಲಪಾತದ ಧುಮ್ಮಿಕ್ಕುವ ರಭಸ, ಆ ರಭಸದಿಂದ ಉಂಟಾಗುವ ಸಪ್ತ ಸ್ವರಗಳ ನಿನಾದವು ಕಿವಿಗಳಿಗೆ ಇಂಪನ್ನು ನೀಡಿದರೆ, ಧುಮ್ಮಿಕ್ಕುವಾಗ ಅಕ್ಕ ಪಕ್ಕದ ಚೂಪಾದ ಕಲ್ಲು ಮೊನಚಿಗೆ ತಾಗಿ ಚಿಲ್ಲನೆ ಚಿಮ್ಮುವ ಮುತ್ತಿನ ಹನಿಗಳ ಸಿಂಚನ ಮೈಗೆ ಹಿತ ನೀಡುತ್ತದೆ. ಆ ೩೩೦ ಅಡಿಗಳ ಎತ್ತರದಿಂದ ಜಲಪಾತದ ಬಟ್ಟಲಿಗೆ ಹಾಲಿನ ನೊರೆಯಂತೆ ಬೀಳುವ ಜಲಧಾರೆ, ಮಧ್ಯೆ ಮಧ್ಯೆ ಉಂಟಾಗುವ ಸಪ್ತ ವರ್ಣದ ಕಾಮನಬಿಲ್ಲು ಕಣ್ಣಿಗೆ ಹಬ್ಬವನ್ನುಂಟು ಮಾಡಿ, ಮನಸ್ಸಿಗೆ ಮುದ ನೀಡಿ ರೋಮಾಂಚನ ಗೊಳಿಸುತ್ತದೆ. ಮುಸ್ಸಂಜೆ ಮಸುಕು ಬೆಳಕಿನ ಬೆಟ್ಟ ಗುಡ್ಡಗಳ ಹಿನ್ನೆಲೆಯಲ್ಲಿನ ದೃಶ್ಯದೊಂದಿಗೆ ಸೂರ್ಯಾಸ್ತಮಾನದ ಸಮಯದಲ್ಲಿ ರವಿಯು ಮೋಡಗಳೊಂದಿಗೆ ಆಟವಾಡುತ್ತ ಒಮ್ಮೆ ರಕ್ತವರ್ಣ ಮತ್ತೊಮ್ಮೆ ಹೊನ್ನಬಣ್ಣ ಚೆಲುವ ಪ್ರಕಾಶದಲ್ಲಿಯಂತೂ ಜಲಪಾತವನ್ನು ಕಂಡ ಕಣ್ಣು ಮತ್ತೇನನ್ನೂ ನೋಡಲಾಗದೆ ತನ್ನ ಸ್ಮೃತಿಪಟಲದಲ್ಲಿ ಅಚ್ಚೊತ್ತಿಕೊಳ್ಳಲು ತೆರೆಯಲಾರದೆ ಮುಚ್ಚಿಕೊಳ್ಳುತ್ತವೆ. ಎಂತಹ ಅರಸಿಕನನ್ನೂ ರಸಿಕನನ್ನಾಗಿಸುವ ಈ ನಿಸರ್ಗ ನಿರ್ಮಿತ ಸೌಂದರ್ಯ ತಾಣದಲ್ಲಿ ಪಡೆಯುವ ಸುಂದರ ಅನುಭವ ಜೀವನದಲ್ಲಿ ಮರೆಯಲಾಗದ ನೆನಪು.

ರುಧಿರೋದ್ಗಾರಿ ಸಂವತ್ಸರ, ಆಶ್ವಯುಜ ಶುದ್ಧ ೧೦, ೧೯ನೆಯ ಅಕ್ಟೋಬರ್ ೧೯೨೩ರಲ್ಲಿ

ಶ್ರೀ ಡಿ.ವಿ. ಗುಂಡಪ್ಪನವರು ಈ ಸೌಂದರ್ಯ ತಾಣವಾದ ಶಿವನಸಮುದ್ರವನ್ನು ಕೆಳಕಂಡಂತೆ ವರ್ಣಿಸಿದ್ದಾರೆ.

ಶಿವನ ಸಮುದ್ರ

ತರಗುಲ್ಮಾವೃತ ಶೈಲಮೆ
ಮರಕತ ಶಿವಲಿಂಗಮೆನುತೆ ಕಾವೇರಿಯದಂ
ಪರಿಚರಿಸಿ ಲೋಕಕೆಲ್ಲಂ
ದೊರೆಯಿಪ ತೀರ್ಥಾಂಬುವಲ್ತೆ ಶಿವನ ಸಮುದ್ರಂ ೧

ಒಂದೆಡೆಯೊಳಾದಿಶಕ್ತಿಯ
ಸಂಧಾನಾದ್ಭುತ ವಿಶೇಷಮಾರ್ಭಟಿಸಲ್ ಮೇ
ಣೊಂದೆಡೆ ಮೆರೆವುದು ಮನುಜನ
ಸಂಧಾನಾದ್ಭುತ ವಿಶೇಷಮಾ ಮಂಡಲದೊಳ್ ೨

ಮೊರೆಯುತೆ ಸರಿಯುತೆ ಭರದಿಂ
ಪರಿದೋಡುತೆ ಜಾರಿ ಪಾರಿ ಮುಕ್ತಾಂಜಲಿಯಂ
ಎರಚುತಲೆರಗುತೆ ರಭಸದಿ
ಬರುತಿರ್ಪಾ ಜಲವಿಲಾಸಮೇನತಿಶಯಮೋ ೩

ಶಿವನೊಡಲ ಹಾರಮೇಂ ನಿಜ
ಭವನಕೆ ಸರಿವಾದಿಶೇಷ ಸಂತತಿಯೇನಾ
ಧವಳತರ ಧಾರೆ ಮಾಡುವು
ದವಲೋಕನಕೊಂದು ಭೀಷ್ಮ ಸಂಮೋಹನಮಂ ೪

ಒಲವೇಂ ಸಂಭ್ರಮವೇಂ ಪ್ರಿಯಾಭಿಸರಮೇಂ ಲಾವಣ್ಯಮೇಂ ಲೀಲೆಯೇಂ
ಮುಳಿಸೇಂ ಸಾಹಸಮೇಂ ಮಹಾಗರುವಮೇಂ ಯಾತ್ರಾವ್ರತೋತ್ಸಾಹಮೇಂ
ಬಲಮಂ ತೋರುವ ಠೀವಿಯೇಂ ಚಪಲಮೇಂ ಮಂದಾತ್ಮರಂ ನಿಂದಿಪಾ
ಚಲಮೇನೀಪರಿ ಧಾವಿಸುತ್ತಲಿಹುದೇಂ ಕಾವೇರಿ ರಾಜ್ಯೇಶ್ವರೀ ೫

ಧೂಮಸ್ತೋಮದ ಮೂಲದತ್ತ ಮೊರೆಗುಂ ಶೀತಾಂಬುಪಾತಂ ಸರಿ
ದ್ರಾಮಾನೇತ್ರದಪಾಂಗಮೆತ್ತಲೆನೆ ವಿದ್ಯುಜ್ಜ್ವಾಲೆಯುಜ್ಜೃಂಭಿಕುಂ
ಈ ಮಾಚಿತ್ರದಿ ಕಾಣ್ಗುಮಲ್ತೆ ದಿಟಮಲ್ಲಂ ತೋರ್ಕೆಯೆಂದೆಂಬುದಾ
ಭೀಮಾಕಾರವ ತಾಳ್ದೊಡೇಂ ಸದಯೆ ನೀಂ ಕಾವೇರಿ ಭದ್ರಂಕರಿ ೬

ಗತಿಯಿಂದದ್ಭುತಮಂ ಜನೋಪಕೃತಿಯಿಂದೌದಾರ್ಯಮಂ ನಿತ್ಯ ಶು
ದ್ಧತೆಯಿಂ ಶಾಂತಿಯನುಗ್ರಭಾವವ ಶಿಲಾನಿರ್ಭೇದದಿಂ ಪರ್ವತ
ಚ್ಯುತಿಯಿಂ ರೌದ್ರವ ತಪ್ಪಿನಿಂ ಪ್ರಯತೆಯಂ ಗಾಂಭೀರ್ಯಮಂ ಘೋಷದಿಂ
ಸತತಂ ಬೋಧಿಸುತಿರ್ಪೆ ದೇವಿ ಸರಸೇ ಕಾವೇರಿ ಕಾವ್ಯಾಶ್ರಯೇ ೭

ಗಿರಿಯ ಕೆಲದಿ ಬನದ ನಡುವೆ ಝುರಿಯ ತೆರದಿ ಸುಳಿದು ಬರುತೆ
ತಲದ ಶಿಲೆಯನಿರಿದು ಕೊರೆದು ಕೆಲದ ನೆಲವನರೆದು ಮುರಿದು ೮

ವಿಮಲ ಜಲದ ವಿಪುಲ ಧಾರೆಯಮೃತ ಲಹರಿಯಂತೆ ತೋರೆ
ದಣಿವ ಕಳೆಯುವೆಲರ ಬೀರಿ ಮೃದುಲ ರವದಿ ಮುಂದೆ ಸಾರಿ ೯

ಅತ್ತಲತ್ತ ಸುಳಿದು ಸುತ್ತಿ ಇತ್ತಲಿತ್ತ ಮೆಲ್ಲನೊತ್ತಿ
ಅಲ್ಲಿ ಬಳುಕುತಿಲ್ಲಿ ಬಾಗಿ ಅಲ್ಲಿ ಬಳಸುತಿಲ್ಲಿ ಸಾಗಿ ೧೦

ನೊರೆಯ ಸೇಸೆಗಳನು ಸೂಸಿ ತೆರೆಯ ಚವರಗಳನು ಬೀಸಿ
ಬಾಲೆಯಂತೆ ನಲಿದು ಕುಣಿದು ಕಾಳಿಯಂತೆ ಕನಲಿ ಮೊರೆದು ೧೧

ಉರಗಿಯಂತೆಯುರುಗಿ ತಿರುಗಿ ಛಲದ ಭರದಿ ಸರಿದು ಮಸಗಿ
ಬೆಟ್ಟದಿಂದಲುರುಳಿ ಹೊರಳಿ ದಿಟ್ಟತನದಿ ತೊಳಗಿ ಮೊಳಗಿ ೧೨

ಘೋರ ವೇಗದಿಂದ ನೆಗೆದು ಭೋರೆನುತ್ತೆ ಮಂಜನೆಸೆದು
ಪನಿಯ ಮುಗಿಲ ಕವಿಸಿ ಸರಿದು ಮನುಜ ಸೇವೆಯಿಂದಲೊಲಿದು ೧೩

ಬಲವ ಬೆಳಕ ನೀಡುತುಂ ನಿಲದೆ ನಾಟ್ಯವಾಡುತುಂ
ನುಗ್ಗಿ ಬೀಳುತೇಳುತುಂ ನೆಗೆದು ಪಾರುತೋಡುತುಂ ೧೪

ಭುವನ ರಚನೆಯೆನಿತು ಕುತುಕಮೆನುತ ಜನಕೆ ಸಾರುತಂ
ಭುವನ ಜನನಿಯೆನಿತು ಚತುರಳೆನುತ ಕಣ್ಗೆ ತೋರುತಂ ೧೫

ಪುರುಷ ಬಲವ ಬೆಳಗಿರೆನುತ ಜಡರ ಪಳಿದು ಮೊಳಗುತುಂ
ಪರಿವಳೀ ಕವೇರತನಯೆ ಧೀರಜನನಿಯೆನಿಸುತುಂ ೧೬

ಕನ್ನಡ ನಾಡಿನ ಕುತುಕಂ
ಕನ್ನಡಿಗರ ಸಾಹಸಕ್ಕೆ ಕನ್ನಡೀ ಮೇಣೀ
ಕನ್ನಡಿಗರ ಭಾಗ್ಯದ ನಿಧಿ
ಯುನ್ನತಿಯಂ ಪಡೆದು ಬಾಳ್ಗೆ ಶಿವನ ಸಮುದ್ರಂ ೧೭

ಶಿವನಸಮುದ್ರದಲ್ಲಿ ವಿದ್ಯುತ್ತನ್ನು ಉತ್ಪಾದಿಸಲು ಸಹಾಯ ಮಾಡುತ್ತ, ಅಲ್ಲಿನ ಪರಿಸರಕ್ಕೆ ಸೌಂದರ್ಯವನ್ನು ಸೃಷ್ಟಿಸಿಕೊಟ್ಟು ಜೀವನದಿಯಾಗಿರುವ ಕಾವೇರಿಗೆ ನಮೋ ನಮಃ.

**ಆಕರಗಳು:**


೧) ಇತಿಹಾಸ ದರ್ಶನ – ಸಂಪುಟ ೧೦, ಎಂ.ಜಿ. ನಾಗರಾಜ್, ಭೂ ಇತಿಹಾಸದ ಬೆಳಕಿನಲ್ಲಿ ಕೊಡಗಿನ ಕಾವೇರಿ ಮತ್ತು ಗಂಗೆ – ಕರ್ನಾಟಕ ಇತಿಹಾಸ ಅಕಾದೆಮಿ, ೧೯೯೫, ಬೆಂಗಳೂರು.
೨) ಎಪಿಗ್ರಾಫಿಯಾ ಕರ್ನಾಟಿಕಾ – ಸಂಪುಟ ೪, ಕೊಳ್ಳೇಗಾಲ, ಶಿವನಸಮುದ್ರ ಶಾಸನಗಳು, ಮೈಸೂರು ವಿಶ್ವವಿದ್ಯಾಲಯ.
೩) ಬೆಳಕಾಯಿತು ಕರ್ನಾಟಕ (ಕರ್ನಾಟಕದಲ್ಲಿ ವಿದ್ಯುಚ್ಛಕ್ತಿಯ ಉಗಮ ಮತ್ತು ವಿಕಾಸ) – ಗಜಾನನ ಶರ್ಮ, ಅಕ್ಷರ ಪ್ರಕಾಶನ, ಹೆಗ್ಗೋಡು – ೨೦೦೩




# ಅರ್ಕಾವೊತ್ತಿನ ಬಳಕೆ ಮತ್ತು ಸ್ಥಾನ

• ಜಿ.ವಿ. ಶ್ರೀನಾಥ ಶಾಸ್ತ್ರಿ

ಗಣಕೀಕರಣದಲ್ಲಿ ಕನ್ನಡ ಬಳಕೆಯ ಹಾದಿಯಲ್ಲಿ ಗಮನಿಸಿದ ಕನ್ನಡ ಬರವಣಿಗೆಯಲ್ಲಿನ ಕೆಲವು ಅತ್ಯಾವಶ್ಯಕ ಮತ್ತು ಪ್ರಮುಖವಾದ ಸಂಗತಿಗಳನ್ನು ಇಲ್ಲಿ ಗುರುತಿಸಲಾಗಿದೆ.

ಕನ್ನಡದಲ್ಲಿ ವ್ಯಂಜನಗಳು ಸೇರಿ ಅಗುವ ಸಂಯುಕ್ತಾಕ್ಷರವನ್ನು ಬರೆಯುವಾಗ ಉಚ್ಚಾರಣೆಯ ಅನುಕ್ರಮಣಿಕೆಗೆ ಸರಿಯಾಗಿ ಲಿಪಿ ರೂಪದಲ್ಲಿ ಬರೆಯಲಾಗುತ್ತದೆ. ಉದಾಹರಣೆಗೆ ಸ್ತ್ರೀ ಎಂಬ ಸಂಯುಕ್ತಾಕ್ಷರದ ವ್ಯಂಜನಗಳು ಕ್ರಮವಾಗಿ 'ಸ್ ತ್ ರ್' ಮತ್ತು ಕೊನೆಯಲ್ಲಿ ಸ್ವರ 'ಈ'. ಇವುಗಳ ಉಚ್ಚಾರಣೆಗಳು, ಬದಲಾದ ರೂಪದಲ್ಲಿ ಇವುಗಳನ್ನು ಬರೆಯುವ ಕ್ರಮ ಹಾಗೂ ಸಂಯುಕ್ತಾಕ್ಷರದ ಉಚ್ಚಾರಣೆ ಇವೆಲ್ಲವೂ ಪರಸ್ಪರ ಹೊಂದಿಕೊಂಡಿರುತ್ತವೆ. ಮೊದಲ ವ್ಯಂಜನದ ಮೂಲಸ್ವರೂಪವನ್ನು ಉಳಿಸಿಕೊಂಡು ಉಚ್ಚಾರಣೆಯ ಅನುಕ್ರಮದಲ್ಲಿ ಉಳಿದ ವ್ಯಂಜನಗಳ ಒತ್ತುಗಳನ್ನು ಬರೆಯುವುದು ಮತ್ತು ಸ್ವರವನ್ನು ಮೊದಲ ವ್ಯಂಜನದೊಡನೆ ಸೇರಿಸುವುದು ಕನ್ನಡದಲ್ಲಿ ಸಂಯುಕ್ತಾಕ್ಷರವನ್ನು ಬರೆಯುವ ಕ್ರಮ.

ಆಧುನಿಕ ಕನ್ನಡದಲ್ಲಿ 'ರ' ವ್ಯಂಜನವು ಮೊದಲ ವ್ಯಂಜನವಾಗಿರುವ ಸಂಯುಕ್ತಾಕ್ಷರಗಳನ್ನು ಮತ್ತೊಂದು ರೀತಿಯಲ್ಲಿ ಬರೆಯಲಾಗುತ್ತದೆ. ಇಂತಹ ಸಂಯುಕ್ತಾಕ್ಷಗಳಲ್ಲಿ 'ರ್'ಗೆ ಪರ್ಯಾಯವಾಗಿ '೯' ಚಿಹ್ನೆಯನ್ನು ಬಳಸುವ, ಅದರ ಉಚ್ಚಾರಣೆ ಮೊದಲೇ ಇದ್ದರೂ ಅದನ್ನು ಮುಂದೆ ಬರೆಯುವ ಪರಿಪಾಠ ಬೆಳೆದು ಬಂದು ಕ್ರಮೇಣ ರೂಢಿಯಾಗಿದೆ. ಅಂದರೆ,

೧) ಕನ್ನಡದಲ್ಲಿ ಸಂಯುಕ್ತಾಕ್ಷರಗಳನ್ನು ಬರೆಯುವ ಸಾಮಾನ್ಯ ನಿಯಮವನ್ನು ಅನುಸರಿಸುವುದು. ಉದಾಹರಣೆಗೆ ರ್, ಯ್ ಮತ್ತು ಅ ಅಕ್ಷರಗಳಿಂದ ಉಂಟಾಗುವ ಸಂಯುಕ್ತಾಕ್ಷರದ ರೂಪ 'ರ್ಯ' ಆಗಿರುತ್ತದೆ. ಅಂದರೆ ಕರ್ರನೆ, ರ್‍ಯಾಂಕ್, ಪರ್‍ಯಾಂಕ, ಕರ್‍ಮಃ,

ಸೂರ್ಯ, ಕರ್ಮ, ಜರ್ಬ್ಬು, ಬೋರ್ಡ್ಡು, ಭರ್ಜರಿ, ನಿರ್ದೇಶ, ಸೂರ್ಯೋದಯ ಇತ್ಯಾದಿ ಪದಗಳಲ್ಲಿನ ಸಂಯುಕ್ತಾಕ್ಷರಗಳು ಈ ಸಾಮಾನ್ಯ ನಿಯಮಕ್ಕೆ ಅನುಸಾರವಾಗಿ ಬರೆಯಲ್ಪಟ್ಟಿವೆ.

೨) ಸಂಸ್ಕೃತದ ಬರವಣಿಗೆ ಅನುಕರಣೆಯಿಂದ ಅರ್ಕಾವೊತ್ತು (ೱ) ಚಿಹ್ನೆ ಬಳಸಿದಾಗ ಈ ಪದಗಳು ತಾಳುವ ಇನ್ನೊಂದು ರೂಪವೆಂದರೆ ಕರ್ರನೆ, ರ್ಯಾಂಕ್. ಪರ್ಯಾಂಕ. ಕರ್ಮಃ, ಸೂರ್ಯ, ಸರ್ಕಾರ, ಕರ್ಮ, ಜರ್ಬು, ಬೋರ್ಡು, ಭರ್ಜರಿ, ನಿರ್ದೇಶ, ಸೂರ್ಯೋದಯ, ಹೀಗೆ ಅನೇಕ ಉದಾಹರಣೆಗಳನ್ನು ಕೊಡಬಹುದು.

ಆದರೆ ಮೇಲ್ಕಂಡ ಉದಾಹರಣೆಗಳಲ್ಲಿನ ಮೊದಲ ಎರಡು ಪದಗಳನ್ನು ಗಮನಿಸಿ. ಈ ಎರಡೂ ಸಂದರ್ಭಗಳಲ್ಲಿ ಅರ್ಕಾವೊತ್ತು ಚಿಹ್ನೆಯ ಬಳಕೆಯನ್ನು ನಿಷೇಧಿಸಲಾಗಿದೆ. ಇದನ್ನು ಬಹುಮುಖ್ಯವಾಗಿ ಎಲ್ಲರೂ ಗಮನಿಸಬೇಕು. ಅಂದರೆ 'ರ' ಮತ್ತು 'ರ' ಸೇರಿದ ಸಂಯುಕ್ತಾಕ್ಷರವನ್ನು ಬರೆಯುವಾಗ ಅರ್ಕಾವೊತ್ತು ಪದ್ಧತಿಗೆ ಅವಕಾಶವಿಲ್ಲ. ಅಂದರೆ 'ಕರ್ರನೆ', 'ಮರ್ರೋ' ಎಂದು ಬರೆಯಬಹುದೇ ಹೊರತು 'ಕರ್ರನೆ', 'ಮರ್ರೋ' ಮುಂತಾಗಿ ಬರೆಯುವ ಹಾಗಿಲ್ಲ. ಅಲ್ಲದೆ ಯಾವುದೇ ಪದದ ಆರಂಭದಲ್ಲಿ 'ರ' ಅಕ್ಷರದಿಂದ ಆರಂಭವಾಗುವ ಸಂಯುಕ್ತಾಕ್ಷರವಿದ್ದಲ್ಲಿ ಆಗ ಆ ಸಂಯುಕ್ತಾಕ್ಷರವನ್ನು ಬರೆಯುವಾಗ 'ೱ' ಚಿಹ್ನೆಯನ್ನು ಬಳಸಲಾಗದು. ಅಂದರೆ 'ರ್ಯಾಂಕ್' ಪದವನ್ನು ಒಪ್ಪಲಾಗುತ್ತದೆಯೇ ಹೊರತು 'ರ್ಯಾಂಕ್' ಪದ ಅಲ್ಲ. ಅಂದರೆ ಪದದ ಆರಂಭದಲ್ಲಿ ಅರ್ಕಾವೊತ್ತು ಚಿಹ್ನೆಯನ್ನು ಬಳಸಿ ಬರೆಯುವ ಸಂಯುಕ್ತಾಕ್ಷರವು ಇರಕೂಡದು.

ಮುಂದುವರೆದು, ರ ಅಕ್ಷರದಿಂದ ಆರಂಭವಾಗುವ ಸಂಯುಕ್ತಾಕ್ಷರಕ್ಕೆ 'ಏ' ಮತ್ತು 'ಓ' ಸ್ವರಗಳನ್ನು ಸೇರಿಸುವಾಗ 'ೱ' ಚಿಹ್ನೆಯನ್ನು ಸರಿಯಾದ ಸ್ಥಳದಲ್ಲಿ ಬರೆಯಬೇಕು. ಉದಾಹರಣೆಗೆ 'ನಿರ್‌ದೇಶಕ (ನಿರ್ದೇಶಕ)', ಸೂರ್‌ಯೋದಯ (ಸೂರ್ಯೋದಯ)' ಮುಂತಾದ ಪದಗಳನ್ನು ಬರೆಯಲು 'ೱ' ಚಿಹ್ನೆಯನ್ನು ಬಳಸಿದಾಗ ಆ ಪದಗಳನ್ನು 'ನಿರ್ದೇಶಕ', 'ಸೂರ್ಯೋದಯ', ಎಂದು ಬರೆಯಬೇಕೇ ಹೊರತು 'ನಿರ್ದೇಶಕ', 'ಸೂರ್ಯೋದಯ' ಎಂದು ಬರೆಯಬಾರದು. ಅಂದರೆ 'ೱ' ಚಿಹ್ನೆಯು ಉಳಿದ ಸ್ವರಚಿಹ್ನೆಗಳ ಸ್ಥಾನವನ್ನು ಬದಲಿಸಬಾರದು. ಈ ಉದಾಹರಣೆಗಳಲ್ಲಿನ ಸಂಯುಕ್ತಾಕ್ಷರಗಳಲ್ಲಿ ಏ ಮತ್ತು ಓ ಸ್ವರಗಳು ಕ್ರಮವಾಗಿ ದ ಮತ್ತು ಯ ವ್ಯಂಜನಗಳೊಡನೆ ಸೇರುವುದರಿಂದ ೀ ಸ್ವರಚಿಹ್ನೆಯನ್ನು ೆ ಮತ್ತು ೊ ಚಿಹ್ನೆಗಳಿಂದ ಬೇರ್ಪಡಿಸಲಾಗದು. ೀ ಚಿಹ್ನೆಗೆ ಪ್ರತ್ಯೇಕ ಅಸ್ತಿತ್ವ ಇಲ್ಲ ಎಂಬುದನ್ನು ಇಲ್ಲಿ ಗಮನಿಸಬೇಕು. ಅಂದರೆ 'ದೇ', ಣೇ', 'ಯೋ' ಎಂದು ಬರೆದಾಗ 'ೱ' ಚಿಹ್ನೆಯು ಏ ಸ್ವರದ ಚಿಹ್ನೆಯ (ೇ) ಎರಡು ಭಾಗಗಳ ಮತ್ತು ಓ ಸ್ವರಚಿಹ್ನೆಯ (ೋ) ಮೂರು ಭಾಗಗಳ ಮಧ್ಯೆ ಪ್ರವೇಶಿಸುತ್ತದೆ. ಇದು ತಪ್ಪಾಗುತ್ತದೆ. ಇವುಗಳನ್ನು ರ್ದೇ, ರ್ಣೇ, ರ್ಯೋ ಎಂದೇ ಬರೆಯಬೇಕಾಗುತ್ತದೆ.

ರ ಅಕ್ಷರದಿಂದ ಆರಂಭವಾಗುವ ಸಂಯುಕ್ತಾಕ್ಷರಕ್ಕೆ ಅನುಸ್ವಾರ ಮತ್ತು ವಿಸರ್ಗದ

ಚಿಹ್ನೆಗಳನ್ನು (ಂ ಮತ್ತು ಃ) ಸೇರಿಸುವಾಗ ಅವುಗಳನ್ನು ಅರ್ಕಾವೊತ್ತು ಚಿಹ್ನೆಯ ನಂತರವೇ ಮೂಡಬೇಕು. ಉದಾಹರಣೆಗೆ 'ಪರ್ಯಾಂಕ', 'ಕರ್ಮಃ' ಪದಗಳನ್ನು ಬರೆಯಲು 'ೱ' ಚಿಹ್ನೆಯನ್ನು ಬಳಸಿದಾಗ ಅವುಗಳನ್ನು 'ಪರ್ಯಾಂಕ', 'ಕರ್ಮಃ' ಎಂದೇ ಬರೆಯಬೇಕಾಗುತ್ತದೆ. ಇವುಗಳನ್ನು 'ಪರ್ಯಾಂೱಕ', 'ಕರ್ಮಃೱ' ಎಂದು ಬರೆದರೆ ತಪ್ಪಾಗುತ್ತದೆ.

ಗಣಕಗಳಲ್ಲಿ ಕನ್ನಡ ಲಿಪಿಯನ್ನು ಮೂಡಿಸಬಲ್ಲ ಎಲ್ಲ ತಂತ್ರಾಂಶ ಪರಿಕರಗಳಲ್ಲೂ ಬಳಕೆದಾರರು 'ರ' ಅಕ್ಷರದಿಂದ ಆರಂಭವಾಗುವ ಯಾವುದೇ ಸಂಯುಕ್ತಾಕ್ಷರವನ್ನು ಎರಡು (ಅಂದರೆ ಸಾಂಪ್ರದಾಯಕ ಹಾಗೂ ಅರ್ಕಾವೊತ್ತು) ರೂಪಗಳಲ್ಲಿ ಯಾವ ರೀತಿಯಲ್ಲಾದರೂ ಮೂಡಿಸಿಕೊಳ್ಳುವ ಅವಕಾಶವನ್ನು ಮಾಡಿಕೊಡುವಂತೆ, 'ರ' ಅಕ್ಷರದಿಂದ ಆರಂಭವಾಗುವ ಸಂಯುಕ್ತಾಕ್ಷರಕ್ಕೆ 'ಏ' ಮತ್ತು 'ಓ' ಸ್ವರಗಳನ್ನು ಸೇರಿಸುವಾಗ 'ೱ' ಚಿಹ್ನೆಯನ್ನು ಸರಿಯಾದ ಸ್ಥಳದಲ್ಲಿ ಮೂಡಲು ಅಗತ್ಯವಾದ ತಾಂತ್ರಿಕತೆಯನ್ನು ಅಳವಡಿಸಲು ಸಂಬಂಧಪಟ್ಟವರು ಸೂಕ್ತಕ್ರಮಗಳನ್ನು ಕೈಗೊಳ್ಳಬೇಕಾಗಿ ವಿನಂತಿ.

ಮೈಕ್ರೋಸಾಫ್ಟ್ ಸೇರಿದಂತೆ ಕನ್ನಡವನ್ನು ಮೂಡಿಸುವ ಹಲವಾರು ತಂತ್ರಾಂಶ ಪರಿಕರಗಳಲ್ಲಿ ಮೇಲ್ಕಂಡ ಕನ್ನಡ ಲಿಪಿ ಸಂಬಂಧದ ಸಮಸ್ಯೆಗಳನ್ನು ಪರಿಹರಿಸಲು ಕಾರ್ಯಕ್ರಮಗಳನ್ನು ಕೈಗೊಳ್ಳುತ್ತಾರೆಂದು ನಿರೀಕ್ಷಿಸಲಾಗಿದೆ. ಇದು ಬಳಕೆದಾರರ ಕೈಗೆಟುಕಿದರೆ ಗಣಕಗಳಲ್ಲಿ ತಪ್ಪುಮಾಡಲು ಹೊರಟರೆ ಅದಕ್ಕೆ ಅವಕಾಶವನ್ನು ಮಾಡಿಕೊಡದಿರುವ ತಾಂತ್ರಿಕತೆಯನ್ನೂ ಅಳವಡಿಸಲು ಸಾಧ್ಯವಾದರೆ ಕನ್ನಡ ಭಾಷೆಯ ಬಳಕೆಯಲ್ಲಿ ಅರ್ಕಾವೊತ್ತಿನ ಬಳಕೆಗೆ ಸಂಬಂಧಿಸಿದ ಯಾವ ಕೊರತೆಗಳೂ ಇಲ್ಲವಾಗುತ್ತವೆ.

ಮುಂದುವರೆದು, ಕನ್ನಡವನ್ನು ಕಲಿಸುವ, ಕಲಿಯುವ ಹಾಗೂ ಬಳಸುವ ಎಲ್ಲರೂ ಈ ವಿಚಾರಗಳನ್ನು ಗಮನಿಸಿ ಬರವಣಿಗೆಗಳಲ್ಲಿ ಈ ತಪ್ಪುಗಳಾಗದಂತೆ ಸೂಕ್ತಕ್ರಮಗಳನ್ನು ಕೈಗೊಳ್ಳ ಬೇಕಾಗಿ ವಿನಂತಿ.



# ಅಭಿಧಾನ ವಸ್ತುಕೋಶದ ತ್ರಿಪದಿಗಳ ಪಾಠ ಪರಿಷ್ಕರಣ ವಿಚಾರ[೧]

• ಸ. ಕಾರ್ತೀಕ್

ಇಮ್ಮಡಿ ನಾಗವರ್ಮನು (ಕ್ರಿ.ಶ. ೧೦೪೨) ಕನ್ನಡಕ್ಕೆ ಆಧಾರಭೂತವಾದ ಗ್ರಂಥಗಳನ್ನು ನೀಡಿ ಮಹೋಪಕಾರ ಮಾಡಿದ್ದಾನೆ. ಅಲಂಕಾರ, ವ್ಯಾಕರಣ, ಛಂದಸ್ಸು, ನಿಘಂಟು, ಚಂಪೂಕಾವ್ಯ ಇವು ಈತನ ಸಾಹಿತ್ಯ ಕೃಷಿಯ ಫಲಗಳು. ಇವುಗಳಲ್ಲಿ ಅತ್ಯಂತ ಉಪಯೋಗಕಾರಿಯಾದ ನಿಘಂಟು 'ಅಭಿಧಾನ ವಸ್ತುಕೋಶ'ವೆಂಬ ಹೆಸರಿನಿಂದ ಮನ್ನಣೆ ಪಡೆದಿದೆ. ಕನ್ನಡ ಸಾಹಿತ್ಯದಲ್ಲಿ ಅನೇಕ ನಿಘಂಟುಗಳು ರಚಿತವಾಗಿದ್ದರೂ ಇಮ್ಮಡಿ ನಾಗವರ್ಮ ಮತ್ತು ಇಮ್ಮಡಿ ಮಂಗರಾಜ ಇವರುಗಳ ಸಂಸ್ಕೃತಿ-ಕನ್ನಡ ನಿಘಂಟುಗಳೇ ದೊಡ್ಡಗಾತ್ರದವು ಮತ್ತು ಪ್ರಸಿದ್ಧವಾದವು. ಮಿಕ್ಕವು ಮಿತವ್ಯಾಪ್ತಿಯ ನಿಘಂಟುಗಳು. ಹೀಗಾಗಿ ಈತನ ನಿಘಂಟಿಗಿಂತ ಮೊದಲೇ ರನ್ನಕವಿಯ ರನ್ನಕಂದವೆಂಬ ನಿಘಂಟು ರಚಿತವಾಗಿದ್ದರೂ ಗಾತ್ರ, ಗುಣದ ದೃಷ್ಟಿಯಿಂದ ಇಮ್ಮಡಿ ನಾಗವರ್ಮನ ನಿಘಂಟೇ ಮೊದಲನೆಯದಾಗಿ ನಿಲ್ಲುತ್ತದೆ. ಹೀಗಾಗಿ ಕನ್ನಡ ಸಾಹಿತ್ಯದಲ್ಲಿ ಈ ನಿಘಂಟಿಗೆ ವೈಶಿಷ್ಟ್ಯಪೂರ್ಣ ಸ್ಥಾನವಿದೆ.

ಅಭಿಧಾನ ವಸ್ತುಕೋಶಕ್ಕೆ ಮೂಲ ಆಕರ ಹಲಾಯುಧನ ಅಭಿಧಾನ ರತ್ನಮಾಲೆಯೆಂಬ ಸಂಸ್ಕೃತ ನಿಘಂಟು. ಆದರೂ ವರರುಚಿ, ಹಲಾಯುಧ, ಭಾಗುರಿ, ಶಾಶ್ವತ್, ಅಮರಸಿಂಹ ಮುಂತಾದವರ ಕೋಶಗಳನ್ನು ನೋಡಿ ವಿಷಯ ಸಂಗ್ರಹಿಸಿ ಈ ನಿಘಂಟನ್ನು ರಚಿಸಿರುವಂತೆ ಕರ್ತೃ ಹೇಳಿಕೊಂಡಿದ್ದಾನೆ. ಹಲಾಯುಧ, ಅಮರಸಿಂಹರ ಕೋಶಗಳ ಹೊರತು ಮಿಕ್ಕವರ ಕೋಶಗಳು ಲಭ್ಯವಿಲ್ಲವಾದ್ದರಿಂದ ಸ್ವೀಕಾರದ ಪ್ರಮಾಣವೆಷ್ಟೆಂದು

---

೧. ನಾಗವರ್ಮನ ವಸ್ತುಕೋಶ - ಪ್ರಬುದ್ಧ ಕರ್ಣಾಟಕ ೫-೨. ಪಂಡಿತ ಎಚ್. ಶೇಷಯ್ಯಂಗಾರ್

ತಿಳಿಯುವ ಹಾಗಿಲ್ಲ. ಪಂಡಿತ ಎಚ್. ಶೇಷಯ್ಯಂಗಾರರು "ಈತನು ಎಲ್ಲ ನಿಘಂಟುಗಳನ್ನು ನೋಡಿದ್ದರೂ ಸಂಪೂರ್ಣವಾಗಿ ಅಮರಕೋಶವನ್ನೇ ಅನುಸರಿಸಿ ಗ್ರಂಥವನ್ನು ರಚಿಸಿರುವನು. ಪ್ರಾಯಶಃ ಅಮರದಲ್ಲಿರುವ ಪದಗಳೆಲ್ಲವೂ ಇಲ್ಲಿ ಸಿಕ್ಕುವುವು"[೧] ಎಂದು ಹೇಳಿದ್ದಾರೆ. ಆದರೆ ಕೃತಿ ಪರಿಶೀಲನೆಯಿಂದ ಹಲಾಯುಧನ ಅಭಿಧಾನ ರತ್ನಮಾಲೆಯನ್ನೇ ಸಂಪೂರ್ಣವಾಗಿ ಅನುಸರಿಸಿದ್ದಾನೆ ಎಂದು ಹೇಳಬಹುದು. ಅಭಿಧಾನ ರತ್ನಮಾಲೆಗೂ ಅಭಿಧಾನ ವಸ್ತುಕೋಶಕ್ಕೂ ಇರುವ ಸಾಮ್ಯತೆ ಅಭಿಧಾನ ವಸ್ತುಕೋಶಕ್ಕೂ ಅಮರಕೋಶಕ್ಕೂ ಇಲ್ಲವೆಂದೇ ಹೇಳಬೇಕು. ಅಭಿಧಾನ ರತ್ನಮಾಲೆಯನ್ನು ಅನುಸರಿಸಿಯೂ ಇಮ್ಮಡಿ ನಾಗವರ್ಮನು ತನ್ನ ಸ್ವಂತಿಕೆಯನ್ನು ಮೆರೆದಿದ್ದಾನೆ.

ಇಂತಹ ಉದ್ದಾಮ ನಿಘಂಟನ್ನು ಸಂಪಾದಿಸಿ, ಪರಿಷ್ಕರಿಸಿ ನಾಡಿಗೆ ನೀಡಿದ ಕೀರ್ತಿ ಶ್ರೀ ಎ. ವೆಂಕಟರಾವ್ ಮತ್ತು ಪಂಡಿತ ಎಚ್. ಶೇಷಯ್ಯಂಗಾರ್ ಅವರದು. ೧೯೩೩ರಲ್ಲಿ ಮದ್ರಾಸ್ ವಿಶ್ವವಿದ್ಯಾನಿಲಯದ ಕನ್ನಡ ಗ್ರಂಥಮಾಲೆಯ ಮೂರನೆಯ ಪುಸ್ತಕವಾಗಿ ಈ ಗ್ರಂಥ ಪ್ರಕಟವಾಗಿದೆ. ಈ ಗ್ರಂಥದ ಪರಿಷ್ಕರಣಕ್ಕೆ ಜನಕ–ಜನ್ಯ ಸಂಬಂಧವಿರುವ ಎರಡು ತಾಳಪ್ರತಿಗಳು ಆಧಾರ ಎಂದು ಸಂಪಾದಕರು ತಿಳಿಸಿ, ಅವುಗಳಿಗೆ ಕ, ಖ ಎಂದು ಸಂಕೇತಗಳನ್ನು ಕೊಟ್ಟು ಅವುಗಳ ಆಧಾರದ ಮೇಲೆ ಪರಿಷ್ಕರಿಸಿರುತ್ತಾರೆ. ಕ, ಖ ಪ್ರತಿಗಳು ಬಹಳ ಅಶುದ್ಧವೆಂದೂ, ಶುದ್ಧ ಪಾಠವುಳ್ಳ ಪದ್ಯಗಳು ಒಂದಾದರೂ ಇಲ್ಲವೆಂದೂ ತಿಳಿಸಿರುತ್ತಾರೆಯೇ ಹೊರತು ಯಾವ ಹೆಚ್ಚಿನ ವಿವರಣೆಯನ್ನೂ ನೀಡಿಲ್ಲ. ಪಾಠಾಂತರಗಳನ್ನು ದಾಖಲಿಸಿಲ್ಲ. ಜೊತೆಗೆ ನಾಗವರ್ಮನು ತನ್ನ ಕೃತಿಯಲ್ಲಿ ಹೇಳಿರುವ ಕೋಶಕಾರರ ಗ್ರಂಥಗಳಿಂದಲೂ ಸಹಾಯ ಪಡೆದು ಗ್ರಂಥದ ಶೋಧನೆಯನ್ನು ಮಾಡಲಾಗಿದೆ ಎಂದು ತಿಳಿಸಿ ವಸ್ತುಕೋಶವನ್ನು ಅನುಸರಿಸಿ ಬರೆದ ಇಮ್ಮಡಿ ಮಂಗರಾಜನ ಭಾಮಿನೀ ಷಟ್ಪದಿಯ ಮಂಗರಾಜ ನಿಘಂಟು, ಹೇಮಚಂದ್ರನ ಹೈಮಕೋಶದಿಂದಲೂ ಸಹಾಯವನ್ನು ಪಡೆಯಲಾಗಿದೆ ಎಂದು ತಿಳಿಸಿರುತ್ತಾರೆ. ಆದರೆ ಸಂಪಾದಕರು ತಿಳಿಸಿರುವಂತೆ ಮಂಗರಾಜ ನಿಘಂಟು ಭಾಮಿನೀ ಷಟ್ಪದಿಯಲ್ಲಿ ರಚಿತವಾಗಿರದೆ ವಾರ್ಧಕ ಷಟ್ಪದಿಯಲ್ಲಿ ರಚಿತವಾಗಿದೆ. ಗ್ರಂಥದ ಮುದ್ರಣವೆಲ್ಲ ಮುಗಿದ ಮೇಲೆ ಟೀಕೆಯೊಡಗೂಡಿದ ತಾಳಪ್ರತಿಯೊಂದು ಡಿ.ಎಲ್. ನರಸಿಂಹಾಚಾರ್ ಅವರಿಂದ ಲಭಿಸಿದ ಕಾರಣ ಆ ಪ್ರತಿಗೆ 'ಗ' ಎಂದು ಸಂಕೇತಿಸಿ ಪರಿಶಿಷ್ಟದಲ್ಲಿ ಈ ಪ್ರತಿಯ ಪಾಠಾಂತರಗಳನ್ನು ನೀಡಿರುತ್ತಾರೆ. ಮೊದಲಲ್ಲಿ ಗ್ರಂಥದ ಬಗೆಗೆ, ಕರ್ತೃವಿನ ಬಗೆಗೆ ಮುನ್ನುಡಿಯಲ್ಲಿ ತಿಳಿಸಿ, ನಂತರ ವಿಷಯಸೂಚಿಕೆಯನ್ನು ನೀಡಿ ಪಠ್ಯವನ್ನು ಮುದ್ರಿಸಲಾಗಿದೆ. ನಂತರ ಇರುವ ಎರಡು ಪರಿಶಿಷ್ಟಗಳಲ್ಲಿ ಕ್ರಮವಾಗಿ ಶಬ್ದಗಳ ಅಕಾರಾದಿ ಮತ್ತು ಗ ಪ್ರತಿಯ ಪಾಠಾಂತರಗಳಿವೆ. ಆನಂತರ ಶುದ್ಧಾಶುದ್ಧ ಪತ್ರಿಕೆಯಿದೆ. ಆದರೆ ಈ ನಿಘಂಟಿನಲ್ಲಿ ಮುದ್ರಣ ದೋಷಗಳು ಇದ್ದು, ಪದಚ್ಛೇದ ದೋಷಗಳು ವ್ಯಾಪಕವಾಗಿವೆ. ಅನೇಕ ಕಡೆ ಗ್ರಂಥಪಾತವಿದೆ. ಕೆಲವು ಕಡೆಯ ಪಾಠಗಳಂತೂ ತುಂಬಾ ವಿಲಕ್ಷಣವಾಗಿವೆ. ಹಲವು ಪದ್ಯಗಳಲ್ಲಿ ಛಂದೋಭಂಗ ಹಾಗೂ ನ್ಯೂನಗಣಗಳು, ಇತರ ವಿಧದ ಪಾಠಕ್ಲೇಶಗಳು ಕಂಡುಬರುತ್ತಿವೆ. ಈ ಕಾರಣಗಳಿಂದ ಈ ಗ್ರಂಥದ ಮತ್ತೊಂದು ಸಾರ್ಥಕ ಪರಿಷ್ಕರಣದ ಅಗತ್ಯವಿದೆ. ಸದ್ಯಕ್ಕೆ ಇಲ್ಲಿ ಇರುವ ಅಂಶಗಣಬದ್ಧ ತ್ರಿಪದಿಗಳ ಪಾಠ ಪರಿಷ್ಕರಣದ ಬಗ್ಗೆ ವಿಚಾರ ಮಾಡಲಾಗಿದೆ.

[೧]ಶಾ ಚತುಷ್ಕಂ ಪರಿವಿಡಿಯಿಂದ[೨]
ವಾ ಚ [ತುಃ] ಪ್ರದಿಶ ವಿದಿಶೆಗಳ್ ॥

*ಅವಿಭಿನ್ನಾರ್ಥ ಕಾಂಡ, ಸ್ವರ್ಗವರ್ಗ-೪೯, ಪುಟ-೯*

೧. ದಿ(೧). ೨. ಸಾ ಚತುಸ್ಕಕ್ಕೆ ಪರಿವಿಧಿಯೆನಿಕುಂ (ಗ)

ಇದು ಮುದ್ರಿತ ಪ್ರತಿಯ ಪಾಠ ಮತ್ತು ಪಾಠಾಂತರ. ಇದರಲ್ಲಿ ಮೊದಲನೆಯ ಪಾದ ಸಲಕ್ಷಣವಾಗಿದೆ. ದ್ವಿತೀಯ ಪಾದದಲ್ಲಿ ಒಂದು ಗಣ ಲೋಪವಾಗಿದೆ. ಮೊದಲನೆಯ ಗಣದ ಸಂಪಾದಕೀಯ ಪಾಠದೊಂದಿಗೆ ತೃತೀಯ ಪಾದ ಸಲಕ್ಷಣವಾಗಿದೆ. ಗ-ಪ್ರತಿಯ ಪಾಠಾಂತರದ ಸಹಾಯದಿಂದ ಈ ತ್ರಿಪದಿಯನ್ನು ಈ ರೀತಿ ಪರಿಷ್ಕರಿಸಬಹುದು.

ಪ್ರಾಚಿಯವಾಚಿ ಪ್ರತೀಚಿಯುದೀಚಿಯಾ
ಶಾ ಚತುಷ್ಕಕ್ಕೆ ಪರಿವಿಡಿಯೆನಿಕುಂ
[ಅ] ಚ [ತುಃ] ಪ್ರದಿಶೆ ವಿದಿಶೆಗಳ್

ಗ. ಪ್ರತಿಯ ಪಾಠದಲ್ಲಿರುವ ಸಾ, ಸ್ಕ, ಧಿ ಇವುಗಳು ಲಿಪಿಕಾರ ಸ್ಖಾಲಿತ್ಯಗಳಾಗಿವೆ. ಆದರೆ ಇಲ್ಲಿ ದ್ವಿತೀಯ ಪಾದದ ನಾಲ್ಕನೇ ಗಣ ಬ್ರಹ್ಮವಾಗುತ್ತದೆ. ಈ ರೀತಿ ವಿಷ್ಣುಗಣಕ್ಕೆ ಬದಲಾಗಿ ಬ್ರಹ್ಮಗಣ ಬರುವುದು ಅಂಶವೃತ್ತಗಳಲ್ಲಿ ಸಾಮಾನ್ಯ. ಜೊತೆಗೆ ದ್ವಿತೀಯ ಪಾದದಲ್ಲಿ ಪರಿವಿಡಿಯೆನಿ [ಸುಗುಂ] ಎಂದಿರುವುದೂ ಅಸಂಭವವೇನಲ್ಲ. ಆಗ ವಿಷ್ಣುಗಣವೇ ಬಂದು ಲಕ್ಷಣಾನುಸಾರಿಯಾಗುತ್ತದೆ. ತೃತೀಯ ಪಾದದಲ್ಲಿ ಮೊದಲನೆ ಅಕ್ಷರ 'ವಾ' ಎಂದು ಇದ್ದು ಅರ್ಥದ ದೃಷ್ಟಿಯಿಂದ ಯಾವುದೇ ಸಾರ್ಥಕತೆ ಇಲ್ಲವಾಗಿದೆ. ಆದ ಕಾರಣ ತಿದ್ದುಪಾಟನ್ನು ಸೂಚಿಸಿದೆ. ಆಗ ಈ ತ್ರಿಪದಿಯ ಅರ್ಥವನ್ನು ಹೀಗೆ ಹೇಳಬಹುದು :

ಪ್ರಾಚಿ (ಪೂರ್ವ), ಅವಾಚಿ (ದಕ್ಷಿಣ), ಪ್ರತೀಚಿ (ಪಶ್ಚಿಮ), ಉದೀಚಿ (ಉತ್ತರ) ಈ ನಾಲ್ಕು ದಿಕ್ಕುಗಳಿಗೆ ಆಗ್ನೇಯ, ನೈಋತ್ಯ, ವಾಯವ್ಯ, ಈಶಾನ್ಯ ಈ ಉಪದಿಕ್ಕುಗಳು ಅನುಕ್ರಮವಾಗಿ ಬರುತ್ತವೆ. ಹಲಾಯುಧನ 'ಅಭಿಧಾನ ರತ್ನಮಾಲೆಯ ಕನ್ನಡ ಟೀಕೆ'ಯಲ್ಲಿ ಪ್ರದಿಶೆ, ವಿದಿಶೆಗಳಿಗೆ 'ಗೊಂಟು' ಎಂದು ಅರ್ಥವನ್ನು ಹೇಳಿದೆ. ಕನ್ನಡ ಸಾಹಿತ್ಯ ಪರಿಷತ್ತಿನ ಕನ್ನಡ ನಿಘಂಟಿನಲ್ಲಿ ಪ್ರದಿಶೆಗೆ (೧) ಸೂಚನೆ, ಆಜ್ಞೆ, ನಿರ್ದೇಶನ (೨) ದಿಕ್‌ಪ್ರದೇಶ, ದಿಕ್ಕು (೩) ಆಗ್ನೇಯ, ನೈಋತ್ಯ, ವಾಯವ್ಯ, ಈಶಾನ್ಯವೆಂಬ ನಾಲ್ಕು ಮೂಲೆ ದಿಕ್ಕು ಎಂದು ಅರ್ಥಗಳನ್ನು ನೀಡಿದೆ. ವಿದಿಶೆಗೆ=ವಿದಿಕ್ಕು ಎಂದು ಹೇಳಿ ಅಭಿಧಾನ ರತ್ನಮಾಲೆಯ ಕನ್ನಡ ಟೀಕೆಯ ಪ್ರಯೋಗವನ್ನು ನೀಡಿದೆ. ಇನ್ನು ಈ ತ್ರಿಪದಿಗೆ ಮೂಲ ಆಕರ 'ಅಭಿಧಾನ ರತ್ನಮಾಲೆ' ಅಲ್ಲಿನ ಶ್ಲೋಕಗಳು ಈ ರೀತಿಯಾಗಿವೆ.

ಐಂದ್ರೀ ಪೂರ್ವಾ ಪ್ರಾಚೀಯಾಮ್ಯಾದಿಕ್ ದಕ್ಷಿಣಾ ತಥಾವಾಚೀ
ಸ್ಯಾದ್ವಾರುಣೀ ಪ್ರತೀಚಿ ಕೌಬೇರಿ ಚೋತ್ತರೋದೀಚೀ ॥ ೧೦೧ ॥

ಅಂತರಾಳದಿಶಶ್ಚಾನ್ಯಾ ವಿದಿಶಃ ಪ್ರದಿಶಸ್ಸ್ಮೃತಾಃ
ಉಪರಿಷ್ಟಾದುಪಯೂರ್ಧ್ವಂ ತಥಾಧಸ್ತಾದ ವಾಗಧಃ ॥ ೧೦೨ ॥

*ಅಭಿಧಾನ ರತ್ನಮಾಲಾ ಕರ್ಣಾಟಕ ಟೀಕೆ ಸ್ವರ್ಗಕಾಂಡಂ, ಪುಟ-೧೭*

ಹಲಾಯುಧ-ನಾಗವರ್ಮರನ್ನೇ ಅನುಸರಿಸಿ ರಚಿತವಾದ ಇಮ್ಮಡಿ ಮಂಗರಾಜನ ಅಭಿನವಾಭಿಧಾನದ ಸಂವಾದಿ ಪದ್ಯ ಈ ರೀತಿಯಾಗಿದೆ.

ಪ್ರಾಚಿಯೆನೆ ಪೂರ್ವ ಮೈಂದ್ರಿಯೆನೆ ಮೂಡಲೆನಿಕ್ಕ
ವಾಚಿ ದಕ್ಷಿಣಮೆನಲು ತೆಂಕಲಾಪ್ರತ್ಯಚ್ ಪ್ರ
ತೀಚಿಯೆನೆ ಪಡುವಲಾ ಕೌಬೇರಿಯುತ್ತರ ಮುದಿಚೀಯೆನೆ ಬಡಗಲಕ್ಕುಂ
ಪ್ರಾಚೀನಮೆನೆ ಮೂಡಲಾದುದಕೆ ಪೆಸರಕ್ಕ
ವಾಚೀನಮೆನೆ ತೆಂಕಲಾದುದೆನಿಸಿಕ್ಕುಂ ಪ್ರ
ತೀಚೀನಮೆನೆ ಪಡುವಲಾದುದುವುದೀಚೀನಮೆನೆ ಬಡಗಲಾದುದಕ್ಕುಂ[೨] ॥ ೧೯ ॥

ಇದರ ಮುಂದಿನ ಪದ್ಯದಲ್ಲಿ ಅಷ್ಟದಿಗ್ಗಜಗಳ ಬಗ್ಗೆ ತಿಳಿಸುವಾಗ ಪ್ರದಿಶೆ ವಿದಿಶೆಯೆನೆ ಗೊಂಟೆನಿಕ್ಕುಂ ಎಂದು ತಿಳಿಸಿರುತ್ತಾನೆ.[೩] ಆದರೆ ಈ ಪದ್ಯದಲ್ಲಿ ತೃತೀಯ ಮತ್ತು ಚತುರ್ಥ ಪಾದದ ಛಂದಸ್ಸು ಕೆಟ್ಟಿದೆ.

೨. [೧]ಐರಣಿಕಂ ಕುರುಕುರುಕಾರಂ[೧] ತದಧ್ಯಕ್ಷಂ
ಭೌರಿಕನೆನಿ[೨]ಕುಂ[೨] ಕುಶೀಲವರ್[೩]
ಚಾರಣರಪ್ಪರ್ ಪೆಸರಿಂ[೪]ದಂ[೪] ॥

*ಅವಿಭಿನ್ನಾರ್ಥ ಕಾಂಡಂ–ಮನುಷ್ಯವರ್ಗಂ–೮೦, ಪುಟ–೬೫*

೧. ಏರಣಿಗಂ ರುಕ್ಮಕಾರಂ(ಗ) ೨. ಸುಗುಮಜಿಗೆ (ಗ) ೩. ಕುಶಲವರ್(ಗ) ೪. ದೆ(ಗ)

ಇದು ಮುದ್ರಿತ ಪ್ರತಿಯ ಪಾಠ ಮತ್ತು ಪಾಠಾಂತರವಾಗಿದೆ. ಇದರಲ್ಲಿ ಮೊದಲನೆಯ ಪಾದ ಅರ್ಥವಾಗುವುದಿಲ್ಲ. ಸಂಪಾದಕರು ಇದರ ಕ್ಲೇಶಗಳನ್ನು ಗಮನಿಸಿ ಪ್ರತ್ಯಂತರಗಳ ಸಹಾಯದಿಂದ ಪರಿಷ್ಕರಿಸಿ ಶುದ್ಧಾಶುದ್ಧ ಪತ್ರಿಕೆಯಲ್ಲಿ ಕಾಣಿಸಿದ್ದಾರೆ. ಅದರಂತೆ ಇದರ ಪಾಠ ಹೀಗಿದೆ.

ಏರಣಿಗಂ ರುಕ್ಮಕಾರಂ ತದಧ್ಯಕ್ಷಂ
ಭೌರಿಕನೆನಿಸುಗುಮಜಿಗೆ ಕುಶೀಲವರ್
ಚಾರಣರಪ್ಪರ್ ಪೆಸರಿಂದ

ಆದರೆ ಇಲ್ಲಿ ದ್ವಿತೀಯ ಪಾದದಲ್ಲಿ ಕುಶೀಲವರ್ ಎಂಬುದರ ಅರ್ಥವೇನೋ ತೃಪ್ತಿಕರ. ಆದರೆ ಗಣರಚನೆ ಕೆಡುತ್ತದೆ. ಆದ್ದರಿಂದ ಗ. ಪ್ರತಿಯ ಪಾಠಾಂತರ ಮತ್ತು ಮುದ್ರಿತ ಪ್ರತಿಯ ಪಾಠದ ಸಹಾಯದಿಂದ ಈ ರೀತಿ ಪರಿಷ್ಕರಿಸಬಹುದು.

ಏರಣಿಗಂ ರುಕ್ಮಕಾರಂ ತದಧ್ಯಕ್ಷಂ
ಬೌರಿಕನೆನಿ[ಕು]ಮಱುಗೆ ಕುಶೀಲವರ್
ಚಾರಣರಪ್ಪರ್ ಪೆಸರಿಂದೆ.

ಈಗ ಈ ತ್ರಿಪದಿಯ ಅರ್ಥವನ್ನು ಈ ರೀತಿ ಹೇಳಬಹುದು :

ಅಕ್ಕಸಾಲಿಗ, ಭಂಡಾರಿ ಇವರುಗಳ ಮುಖ್ಯಸ್ಥ ಸುವರ್ಣಾಧಿಕಾರಿ ನಟರು, ಸ್ತುತಿಪಾಠಕರು ಜ್ಞಾನಕ್ಕೆ, ತಿಳಿವಿಗೆ ಹೆಸರುವಾಸಿಯಾಗಿದ್ದಾರೆ.

ಈ ತ್ರಿಪದಿಗೆ ಹಲಾಯುಧನ ನಿಘಂಟಿನಲ್ಲಿ ಆಕರ ದೊರೆಯದ ಕಾರಣ ಆಕರ ಸೂಚಿಸಿಲ್ಲ.

---

೨. ಅಭಿನವಾಭಿಧನಂ – ಸ್ವರ್ಗಕಾಂಡ – ದಿಗ್ವರ್ಗಂ
೩. ಸ್ವರ್ಗಕಾಂಡ – ದಿಗ್ವರ್ಗಂ – ಪುಟ–೧೭–೧೮, ಪದ್ಯ–೨೦

೩. ಪಾ[೧]ನಂ[೧] ಗೋಷ್ಠಿಕೆಯದಾ ಪಾ[೨]ನಂ[೨] ಶುಂಡಾಪ್ರ
ಪಾನಂ [೩]ಕಳ್ಳುಡಿಹ ಕಡುಸೊರ್ಕು ಚರ್ಕ್ಕಣಂ[೩]
ತಾನದು ಪೆಸರೊ[೪]ಳದುಂ[೪] ॥
ಅವಿಭಿನ್ನಾರ್ಥಕಾಂಡಂ-ಧಾನ್ಯವರ್ಗಂ-೬, ಪುಟ ೯೩
೧. ನ(ಗ), ೨. ನಕಂ(ಗ), ೩. ನಾಣ್ಗೆಡಿಪ ಕಡುಸೊಕ್ಕು ಭಕ್ತಣಂ(ಗ),
೪.ಳುಪದಂಶಂ (ಗ)

ಇದು ಮುದ್ರಿತ ಪ್ರತಿಯ ಪಾಠ ಮತ್ತು ಪಾಠಾಂತರವಾಗಿದೆ. ಇಲ್ಲಿ ಪ್ರಥಮಪಾದದಲ್ಲಿ ಮೂರನೆಯ ಗಣ ಬ್ರಹ್ಮಗಣವಾಗಿದೆ. ಪರ್ಯಾಯ ಗಣದ ನಿಯಮಾನುಸಾರ ಪ್ರಥಮ ಪಾದದ ಪಾಠ ಸರಿಯಾಗಿದೆ. ದ್ವಿತೀಯ ಪಾದದ ಪಾಠವೂ ಸರಿಯಾಗಿದೆ. ದ್ವಿತೀಯ ಪಾದದಲ್ಲಿ ಚರ್ಕ್ಕಣಂ ಎಂಬುದಕ್ಕೆ ಗ-ಪ್ರತಿಯಲ್ಲಿ ಭಕ್ತಣಂ ಎಂದಿದೆ. ಸಂಪಾದಕರು ಶುದ್ಧಾಶುದ್ಧ ಪತ್ರಿಕೆಯಲ್ಲಿ ಚರ್ಕ್ಕಣಂ ಪಾಠಕ್ಕೆ ಭಿಕ್ಷಣಂ ಎಂದು ತಿದ್ದುಪಾಟನ್ನು ಸೂಚಿಸಿದ್ದಾರೆ. ಗ-ಪ್ರತಿಯ ಭಕ್ಷಣ ಪಾಠಕ್ಕೆ ಚ, ಭಗಳ ಅಕ್ಷರ ಸಾದೃಶ್ಯ ಕಾರಣವಾಗಿದೆ. ಸಂಪಾದಕರ ತಿದ್ದುಪಡಿಯೂ ಸಾಧುವಾಗಿಲ್ಲ. ಚಕ್ಕಣ ಎಂದರೆ ನಂಜಿಕೊಳ್ಳುವ ಪದಾರ್ಥ. ಚರ್ಕ್ಕಣ ಎಂಬುದರ ರೂಪ ಚಿಂತನೀಯ. ವಸ್ತುಕೋಶದ ಚರ್ಕ್ಕಣ ಎಂಬಲ್ಲಿಯ ರಕಾರ ಕಡುಸೊರ್ಕು ಎಂಬಲ್ಲಿಯ ರಕಾರದ ಪ್ರಭಾವದಿಂದ ಘಟಿಸಿರಬಹುದೆಂದೂ ಸಂಸ್ಕೃತ ನಿಘಂಟುಕಾರರು ತೋರಿಸಿರುವ ಖಾದನಾರ್ಥದ 'ಚಕ್ಷಣ' ಎಂಬುದರ ತದ್ಭವ ಶಬ್ದವೇ 'ಚಕ್ಕಣಂ' ಆಗಿದೆಯೆಂದೂ ತಿಳಿಯುವುದು ಬಹುಶಃ ತಪ್ಪಾಗಲಾರದು; ಚಕ್ಷಣಂ>ಚಕ್ಕಣಂ ಎಂದು ಡಾ॥ ಟಿ.ವಿ. ವೆಂಕಟಾಚಲಶಾಸ್ತ್ರಿಗಳು ಸೂಚಿಸಿದ್ದಾರೆ.[೪] ತೃತೀಯ ಪಾದದಲ್ಲಿ ಒಂದು ಗಣ ಕಡಿಮೆಯಾಗಿದೆ. ಗ-ಪ್ರತಿಯ ಪಾಠವನ್ನು ಅಂಗೀಕರಿಸಿದರೆ ಛಂದಸ್ಸು ಮತ್ತು ಅರ್ಥ ಎರಡೂ ಸರಿಬರುತ್ತದೆ. ಆಗ ತ್ರಿಪದಿಯ ಪರಿಷ್ಕೃತ ಪಾಠ ಹೀಗಿರುತ್ತದೆ :

ಪಾನಂ ಗೋಷ್ಠಕೆಯದಾಪಾನಂ ಶುಂಡಾಪ್ರ
ಪಾನಂ ಕಳ್ಳುಡಿಹ ಕಡುಸೊರ್ಕು ಚರ್ಕ್ಕಣಂ
ತಾನದು ಪೆಸರೊಳುಪದಂಶಂ.

ಈಗ ತ್ರಿಪದಿಯ ಅರ್ಥವನ್ನು ಈ ರೀತಿ ಹೇಳಬಹುದು.

ಪಾನ ಎಂದೂ, ಶುಂಡಾಪ್ರಪಾನ ಎಂದೂ ಕಳ್ಳು ಎಂದೂ ಪಾನಗೋಷ್ಠಿಯಲ್ಲಿ ಹೆಸರಿದೆ. ಇವಕ್ಕೆ ನಂಜಿಕೊಳ್ಳಲು ಚಕ್ಕಣ ಎಂಬ ಪದಾರ್ಥ ಬೇಕಾಗುತ್ತದೆ.

ಹಲಾಯುಧ ನಿಘಂಟಿನ ಕನ್ನಡ ಟೀಕೆಯಲ್ಲಿ ಶುಂಡಾ ಶಬ್ದಕ್ಕೆ ೨೪ ಬಗೆಯ ಕಳ್ಳುಗಳಲ್ಲಿ ಒಂದು ಎಂದರ್ಥವನ್ನು ಹೇಳಿದೆ.

ಈ ಪದ್ಯದ ಮೂಲ ಆಕರ ಹಲಾಯುಧನ ನಿಘಂಟು, ಅಲ್ಲಿನ ಶ್ಲೋಕ ಈ ರೀತಿಯಾಗಿದೆ.

ಆ ಪಾನಂ ಪಾನಗೋಷ್ಠೀಸ್ಯಾತ್ಸ ಪೀತಿಃ ಸಹಪಾನಕಂ
ಉಪದಂಶಾವದಂಶೌ ಚ ಚಕ್ಷಣಂ ಸಂಪ್ರಚಕ್ಷತೇ
॥ ೧೭೩ ॥

---

೪. ಪಂಪ ಭಾರತದ ಕೆಲವು ಪದಪಾಠಗಳು - ಶಾಸ್ತ್ರೀಯ-೧, ಸಪ್ನ ಬುಕ್‌ಹೌಸ್. ಬೆಂಗಳೂರು - ೧೯೯೯

